# ಕನ್ನಡಕ್ಕೆ
# 'ಶಾಸ್ತ್ರೀಯ ಭಾಷೆ' ಸ್ಥಾನಮಾನ
## ಇದಕ್ಕಾಗಿ ಹೋರಾಡಿದ ಸಮಸ್ತ ಕನ್ನಡಿಗರಿಗೆ ವಂದನೆ, ಅಭಿನಂದನೆ

ಕರ್ನಾಟಕ–ಸುಂದರ ನದಿವನಗಳ ನಾಡು. ಕಲೆ ಸಂಸ್ಕೃತಿಗಳ ಬೀಡು. ಕವಿಗಳು, ವಚನಕಾರರು, ದಾಸಶ್ರೇಷ್ಠರುಗಳ ನೆಲೆವೀಡು. ವೀರ ವನಿತೆಯರ ಪುಣ್ಯಭೂಮಿ. ಮಾದರಿ ಆಡಳಿತದ ಮಾರ್ಗದರ್ಶಿ ರಾಜ್ಯ. ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನದ ತವರೂರು. ಕರ್ನಾಟಕದ ರಾಜಧಾನಿ ಬೆಂಗಳೂರು ವಿಶ್ವವಿಖ್ಯಾತಿಯ ನಗರ, ಇಂತಹ ಭವ್ಯ ಪರಂಪರೆ, ಹಿನ್ನೆಲೆಯ ಭದ್ರ ಬುನಾದಿಯ ಮೇಲೆ ಸಮೃದ್ಧ ಕರ್ನಾಟಕವನ್ನು ಕಟ್ಟುವ ಸಂಕಲ್ಪ ನಮ್ಮದು

## ನಾಡು ನುಡಿಗೆ ವಿಶೇಷ ಕಾರ್ಯಕ್ರಮಗಳು

- ಬೆಂಗಳೂರಿನಲ್ಲಿ ವರನಟ ಡಾ. ರಾಜ್‌ಕುಮಾರ್ ಸ್ಮಾರಕ ನಿರ್ಮಾಣಕ್ಕೆ 8 ಕೋಟಿ ರೂ.
- ಬೆಳಗಾವಿಯಲ್ಲಿ ವಿಶ್ವ ಕನ್ನಡ ಸಮ್ಮೇಳನಕ್ಕಾಗಿ 25 ಕೋಟಿ ರೂ.
- ರಾಜ್ಯದ ಗಡಿಜಿಲ್ಲೆಗಳಲ್ಲಿ 4 ಸುವರ್ಣ ಕರ್ನಾಟಕ ಭವನಗಳ ನಿರ್ಮಾಣಕ್ಕೆ 5 ಕೋಟಿ ರೂ.
- ರಾಜ್ಯಮಟ್ಟದಲ್ಲಿ ಪ್ರಪ್ರಥಮ ಬಾರಿಗೆ ಸಂತಕವಿ ಕನಕದಾಸರ ಜಯಂತಿ ಆಚರಣೆ.
- ಕನಕ ಜಯಂತಿಗೆ ಸಾರ್ವತ್ರಿಕ ರಜೆ, ಕನಕದಾಸರ ಜನ್ಮಸ್ಥಳ 'ಬಾಡ' ಅಭಿವೃದ್ಧಿಗೆ 1 ಕೋಟಿ ರೂ.
- ಕನ್ನಡದ ಮೇರುಕೃತಿಗಳು ಮತ್ತು ಡಾ. ಬಿ. ಆರ್. ಅಂಬೇಡ್ಕರ್ ಕೃತಿಗಳ ಪುನರ್ ಮುದ್ರಣ
- ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಂಶೋಧನಾ ಕೇಂದ್ರ, ಶಿವಯೋಗಿ ಶಿಶುನಾಳ ಷರೀಫರ ಸಮಾಧಿ ಮತ್ತು ಸಂಗೊಳ್ಳಿ ರಾಯಣ್ಣ ಜನ್ಮಸ್ಥಳ ಅಭಿವೃದ್ಧಿಗೆ ತಲಾ 1 ಕೋಟಿ ರೂ.
- ಅಲ್ಲಮ ಪ್ರಭು ಸಾಹಿತ್ಯ ಸಂಶೋಧನಾ ಕೇಂದ್ರ ಸ್ಥಾಪನೆ
- ಮೈಸೂರಿನಲ್ಲಿ ಸ್ವಾಮಿ ವಿವೇಕಾನಂದರ ಭೇಟಿ ನೆನಪಿಗೆ ಸಾಂಸ್ಕೃತಿಕ ಯುವ ಕೇಂದ್ರ ಸ್ಥಾಪನೆಗೆ 5 ಕೋಟಿ ರೂ.
- ಹಂಪಿ ಉತ್ಸವ, ಕಿತ್ತೂರು ಉತ್ಸವ, ಕದಂಬ ಉತ್ಸವ, ಕರಾವಳಿ ಉತ್ಸವ ಇತ್ಯಾದಿ ಸಾಂಸ್ಕೃತಿಕ ಉತ್ಸವಗಳ ಮೂಲಕ ನಾಡಿನಾದ್ಯಂತ ಕಲೆ ಸಂಸ್ಕೃತಿಗಳ ಪುನರುಜ್ಜೀವನಕ್ಕೆ ಪ್ರೋತ್ಸಾಹ
- ರಾಜ್ಯೋತ್ಸವ ಪ್ರಶಸ್ತಿ ವಿಜೇತರಿಗೆ ಪ್ರಪ್ರಥಮಬಾರಿಗೆ 1 ಲಕ್ಷ ರೂ. ನಗದು ಬಹುಮಾನ
- ಅನಿವಾಸಿ ಕನ್ನಡಿಗರಿಗಾಗಿ 'ಅನಿವಾಸಿ ಕನ್ನಡಿಗರ ಕೋಶ' ಸ್ಥಾಪನೆ.

**"ಅಭಿವೃದ್ಧಿಯೇ ಆಡಳಿತ ಮಂತ್ರ"** **ಕಟ್ಟುವೆವು ನಾವು ಹೊಸ ನಾಡೊಂದನು**


ಕರ್ನಾಟಕ ವಾರ್ತೆ

# ನಮ್ಮ ಮಾನಸ

**ನವೆಂಬರ್ 2010**

ಸಂಪುಟ : 4 ಸಂಚಿಕೆ : 7

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎಸ್.**

*ಮಾನಸ ಬಳಗ*
**ತಸ್ನೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎಸ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ),**
**ಅನಂತರ 'ಮಾನಸ',**
**ಈಗ 'ನಮ್ಮ ಮಾನಸ'**




ಸಂಪಾದಕೀಯ

# ಅತಂತ್ರಗೊಂಡ ರಾಜಕಾರಣಕ್ಕೆ ಮಹಿಳೆ ದಾರಿತೋರ ಬಲ್ಲಳೆ...

ಕರ್ನಾಟಕ ರಾಜಕೀಯ ಪ್ರಜ್ಞಾವಂತರಲ್ಲಿ ಹೇಸಿಗೆ ಹುಟ್ಟಿಸುವ ವಿಚಾರವಾಗಿದೆ. ಪುರುಷ ಪ್ರಧಾನ ಸಮಾಜದ ಈ ರಾಜಕಾರಣಿಗಳಿಂದ ಬದುಕಿಗೆ ಸಮಗ್ರ ಬದಲಾವಣೆ ತರಬಲ್ಲಂತಹ ಸರ್ಕಾರ, ಪ್ರಭುತ್ವ ರೂಪಿತವಾಗಬಲ್ಲದೇ ಎಂಬುದು ಈಗ ಆತಂಕದ ವಿಚಾರವಾಗಿದೆ. ಮೌಲ್ಯಾಧಾರಿತ ರಾಜಕೀಯಕ್ಕೆ ತಿಲಾಂಜಲಿ ಇತ್ತ ಕರ್ನಾಟಕದ ರಾಜಕೀಯ ಪಕ್ಷಗಳ ದೊಂಬರಾಟ ಜನಸಾಮಾನ್ಯರಲ್ಲಿ ಉಸಿರು ಗಟ್ಟಿಸುವಂತಾಗಿದೆ. ಶಾಸಕರು ಕೋಟಿಗಳಿಗೆ ತಮ್ಮನ್ನು ಒತ್ತೆ ಇಟ್ಟುಕೊಳ್ಳತೊಡಗಿದ್ದಾರೆ. ವಿಮಾನಗಳಲ್ಲಿ ಪ್ರಯಾಣ ಮಾಡುತ್ತಾ ರೆಸಾರ್ಟ್, ಸಿ.ಡಿ. ರಾಜಕೀಯದಲ್ಲಿ ತಮ್ಮ ಪಕ್ಷದ ಕೋಟೆಗಳನ್ನು ಭದ್ರಪಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇಂತಹ ತತ್ವರಹಿತ, ಸಿದ್ಧಾಂತರಹಿತ ರಾಜಕಾರಣಿಗಳಿಂದ ನಾವು ಯಾವ ಬದಲಾವಣೆ ಬಯಸಬಹುದಾಗಿದೆ? ಧರಣಿ–ಮುಷ್ಕರ ಕೂರುತ್ತಾ, ಊರೂರಿಗೆ ತಿರುಗಿ ಜಾಥಾ ಮಾಡುತ್ತಾ ತಿರುಗುವ ಈ ರಾಜಕಾರಣಿಗಳಿಂದ ನಾವು ಮಹಿಳೆಯರು ಯಾವ ಬದಲಾವಣೆ ಬಯಸೋಣ? ನಡು ನಡುವೆ ಕೆಲವು ರಾಜಕಾರಣಿಗಳು 'ಕೈ ಕಟ್ಟಿಕೊಂಡು ಸುಮ್ಮನೆ ಕುತಿರಲು ನಾವು ಬಳೆ ತೊಟ್ಟುಕೊಂಡಿದ್ದೇವೆಯೇ' ಎಂದು ತಮ್ಮ ಪುರುಷತ್ವಕ್ಕೇ ಸವಾಲು ಹಾಕಿಕೊಂಡು ಮಾಡುವ ಈ ರಾಜಕಾರಣ ಮಹಿಳೆಯರನ್ನು ಅಪಮಾನಿಸುತ್ತದಾಗಲೀ ಅವರ ಸಮಸ್ಯೆಗಳಿಗೆ ಸ್ಪಂದಿಸೀತೆ? ನೊಂದ ಮಹಿಳೆಯರಿಗೆ ನ್ಯಾಯ ಒದಗಿಸೀತೆ?

2005ರಲ್ಲಿ ಅತ್ಯಾಚಾರಕ್ಕೆ ಒಳಗಾಗಿ ಕೊಲೆಯಾದ ಪ್ರತಿಭಾಗೆ ನ್ಯಾಯ ಒದಗಿಸುವಲ್ಲಿ ನ್ಯಾಯಾಲಯ ಐದು ವರ್ಷ ತೆಗೆದುಕೊಂಡಿದೆ. ಈ ಐದು ವರ್ಷಗಳಲ್ಲಿ ಇರುವ ಒಬ್ಬಳೇ ಮಗಳನ್ನು ಬರ್ಬರವಾಗಿ ಸಾಯಿಸಿದ ನೋವನ್ನು ಹೊತ್ತುಕೊಂಡು ಆಕೆಯ ತಾಯಿ ಹೇಗೆ ಸತ್ತು ಬದುಕಿದಳು? ಅಪರಾಧಿಯ ಹೆಂಡತಿಯು ಎದುರಿಸಿದ ಸಂಕಟಗಳು, ಆಕೆ ಯಾವ ನೋವು/ಸವಾಲು ಎದುರಿಸಿದಳು ಎಂಬ ಪ್ರಶ್ನೆಗಳು ನಮ್ಮ ರಾಜಕಾರಣಿಗಳ ತಲೆಯಲ್ಲಾಗಲೀ, ನ್ಯಾಯಾಲಯದ ಪರಿಧಿಯಲ್ಲಾಗಲೀ ಉದ್ಭವಿಸಬಲ್ಲವೇ? ನಿತ್ಯ ನಡೆಯುವ, ಸುದ್ದಿಯೇ ಆಗದ, ಅಂಚಿಗೆ ತಳ್ಳಲ್ಪಟ್ಟ ಮಹಿಳೆಯರ ಮೇಲಿನ ದೌರ್ಜನ್ಯ ಇವರ ಕಳಕಳಿಯಾಗಿದೆಯೇ? ಕೌಟುಂಬಿಕ ನ್ಯಾಯಾಲಯ ಮಹಿಳೆಯರ ಜೀವನವನ್ನು ಸುಗಮವಾಗಿಸುತ್ತಿದೆಯೇ? ಯಾವ ಮಹಿಳೆಯೂ ಅತ್ಯಾಚಾರಕ್ಕೆ ಒಳಗಾಗದಂತಹ ಒಂದು ರಕ್ಷಣಾ ವ್ಯವಸ್ಥೆ ನಾವು ಮಾಡಲೇಬೇಕೆಂಬ ಇಚ್ಛಾಶಕ್ತಿಯುಳ್ಳ, ರಾಜಕಾರಣಿಗಳಿದ್ದಾರೆಯೇ? ಹಲವಾರು ಕಾರಣಗಳಿಂದ ಶಿಕ್ಷಣ ಮುಂದುವರಿಸಲಾರದ ಅಸಂಘಟಿತ ಕ್ಷೇತ್ರದ ಮಹಿಳೆಯರ ಉದ್ಯೋಗದ ಬಗ್ಗೆ ಇಂತಹ ರಾಜಕಾರಣ ಮಾತನಾಡಬಲ್ಲದೇ? ಸಾಲಬಾಧೆಯಿಂದ ಬೆಂದು ಆತ್ಮಹತ್ಯೆ ಮಾಡಿಕೊಂಡ ರೈತ ಕುಟುಂಬದ ಹೆಣ್ಣುಮಕ್ಕಳು ಈ ಹೊತ್ತು ಹೇಗೆ ಬದುಕು ನಡೆಸುತ್ತಾರೆಂಬುದು ನಮ್ಮ ರಾಜಕಾರಣಕ್ಕೆಂದಾದರೂ ಕಳಕಳಿಯಾಗಿದೆಯೇ? ಮದುವೆಯಾಗಿ ವರದಕ್ಷಣೆಗಾಗಿ ಕಗ್ಗೊಲೆಯಾಗುತ್ತಿರುವ ಹೆಣ್ಣುಮಕ್ಕಳು ಇವರ ಕಣ್ಣು ತೆರೆಯಿಸುತ್ತಾರೆಯೇ? ಕೃಷಿ ಭೂಮಿಯಲ್ಲಿ ಕೂಲಿ ನಾಲಿ ಸಿಗದೇ ನಗರದತ್ತ ಮುಖ ಮಾಡುತ್ತಿರುವ ಕೂಲಿ–ಕಾರ್ಮಿಕ ಹೆಣ್ಣುಮಕ್ಕಳ ಬಡತನದ ಶಾಪ ಇವರಿಗೆ ತಟ್ಟಬಲ್ಲದೇ? ಬೀದಿಯಲ್ಲಿ ಕಸಗುಡಿಸುವ ದಲಿತ ಹೆಣ್ಣುಮಕ್ಕಳ ಸ್ಥಿತಿ–ಗತಿಗಳು ಇವರ ಪ್ರಜ್ಞೆಯನ್ನು ಕುಕ್ಕಬಲ್ಲವೇ? ನೆರೆಹಾವಳಿಯಲ್ಲಿ ಬೀದಿಪಾಲಾಗಿರುವ ಮಹಿಳೆಯರು ಶೌಚಾಲಯಗಳೂ ಇಲ್ಲದೇ ಒದ್ದಾಡುವುದು ಇವರ ಕಣ್ಣಿಗೆ ಬೀಳುತ್ತಿದೆಯೇ? ಸಂಘರ್ಷಗಳಲ್ಲಿ ನಡೆಯುವ, ನಡೆದಿರುವ ಮಹಿಳೆಯರ ಮೇಲಿನ ಸಾಮೂಹಿಕ ಅತ್ಯಾಚಾರಗಳು ಇವರನ್ನು ಕೆರಳಿಸಬಲ್ಲವೇ? ಹೆಸರಿಗೊಂದು ಮಹಿಳಾ ಮಂತ್ರಿ, ಒಂದು ಮಹಿಳಾ ಕಮಿಷನ್, ಜೊತೆಗೆ ಒಂದು ಮಹಿಳಾ ಅಭಿವೃದ್ಧಿ ಮಂಡಳಿ! ರೈತ ಚಳವಳಿ, ಮಹಿಳಾ ಚಳವಳಿ, ಪ್ರಗತಿಪರ ಸಂಘಟನಾ ಚಳವಳಿ,

ರಾಜಕೀಯ ಬದ್ಧತೆಯುಳ್ಳ ಸಂಘಟನಾ ಚಳವಳಿಗಳ ಕಾವೂ ಇಲ್ಲ; ಇವು ಹಣದ ರಾಜಕಾರಣದ ಬೇರನ್ನು ಅಲುಗಾಡಿಸುತ್ತಲೂ ಇಲ್ಲ. ಪ್ರತಿಭಾಳಂಥವರು ಕಗ್ಗೊಲೆಯಾಗುತ್ತಲೇ ಇರುತ್ತಾರೆ. ಇಂತಹ ರಾಜಕಾರಣ ನಮಗೆ ಬೇಕೇ?

ಕೇರಳದ 'ಕುಟುಂಬಶ್ರೀ' ಸಂಸ್ಥೆಯ ಮಹಿಳೆಯರು ಹೊಸ ರಾಜಕೀಯದ ಭಾಷ್ಯ ಬರೆಯುವತ್ತ ಒಂದು ಹೆಜ್ಜೆ ಇಟ್ಟಿದ್ದಾರೆ. ಕೇರಳದ ಸ್ಥಳೀಯ ಸಂಸ್ಥೆಗಳಿಗೆ–ಪಂಚಾಯತಿಯೂ ಸೇರಿದಂತೆ–ಈಗ ಚುನಾವಣೆ ಸನ್ನಿಹಿತವಾಗಿದೆ. ಒಟ್ಟು 50% ಕ್ಷೇತ್ರಗಳಲ್ಲಿ ರೈತ, ಹೊಲಿಗೆ ಕೆಲಸ ಮಾಡುವ, ಬೀದಿಯಲ್ಲಿ ಮಾರುವ, ಅಕೌಂಟೆಂಟ್ ಆಗಿರುವ ಹಾಗೂ ಕಾರ್ಯಕರ್ತೆಯರಾಗಿರುವ ಮತ್ತು ಎಂ.ಕಾಂ. ಓದಿದ ಮಹಿಳೆಯರು – ಹೀಗೆ ಹಲವಾರು ಸ್ತರದ ಮಹಿಳೆಯರು ಸ್ಥಳೀಯ ಸಂಸ್ಥೆಗಳ ಚುನಾವಣೆಯ ಕಣಕ್ಕಿಳಿದಿದ್ದಾರೆ. ಈ ಸ್ಪರ್ಧಿಗಳಲ್ಲಿ ಬಹಳಷ್ಟು ಮಹಿಳೆಯರು ಬಡವರು ಮತ್ತು ರಾಜ್ಯಸರ್ಕಾರದ ಬಡತನ ವಿರೋಧಿ ಯೋಜನೆಯಾದ 'ಕುಟುಂಬಶ್ರೀ' ಯೋಜನೆಯ ಅಡಿ ಹೆಚ್ಚು ಕ್ರಿಯಾಶೀಲರಾದವರು. ಈ ಸಂಸ್ಥೆಯ ಸದಸ್ಯರಾಗಿರುವ ಬಹುಮಂದಿ ಮಹಿಳೆಯರು ಬೇರೆ ಬೇರೆ ಪಕ್ಷಗಳಲ್ಲಿ, ಸ್ವತಂತ್ರವಾಗಿ ಸ್ಪರ್ಧೆಯ ಕಣಕ್ಕೆ ಇಳಿದಿದ್ದಾರೆ. ಮೀಸಲಿರದ ಸಾಮಾನ್ಯ ಕ್ಷೇತ್ರಗಳಲ್ಲಿ ಕೂಡಾ ಕೆಲವು ಮಹಿಳೆಯರು ಸ್ಪರ್ಧೆಗಿಳಿದಿದ್ದಾರೆ.

ಚುನಾವಣೆಯ ಕಣಕ್ಕಿಳಿದಿರುವ ಮಹಿಳೆಯರು ಕೇಂದ್ರೀಕರಿಸುತ್ತಿರುವ ಸಮಸ್ಯೆಗಳೂ ಕೂಡಾ ಗಮನ ಸೆಳೆಯುತ್ತಿವೆ. 50% ಮೀಸಲಾತಿಯಿಂದಾಗಿ ಮಹಿಳೆಯರು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳುವಲ್ಲಿ ಒಂದು ಮಹತ್ವವಾದ ಹೆಜ್ಜೆ ಎಂದು ಇವರು ಗುರುತಿಸುತ್ತಾರೆ. 'ದಿನಗೂಲಿ ಮಾಡುವ ಮಹಿಳೆಯರ ಸಮಸ್ಯೆ' ಮುಖ್ಯ ಎಂದು ಓರ್ವ ಮಹಿಳಾ ಸ್ಪರ್ಧಿ ನುಡಿದರೆ, 'ಮದ್ಯಪಾನ ನಿಷೇಧ'ವನ್ನು ಮಹಿಳಾ ಸ್ಪರ್ಧಿಗಳು ಸಮರ್ಥವಾಗಿ ಜಾರಿಗೊಳಿಸಬಲ್ಲರು ಎಂದು ಇನ್ನೋರ್ವ ಸ್ಪರ್ಧಿ ನುಡಿಯುತ್ತಾರೆ. 'ಸಮಾನತೆ' ಮುಖ್ಯ ಸಮಸ್ಯೆ ಎಂದು ಹೊಲಿಗೆ ಕೆಲಸದ ಸ್ಪರ್ಧಿ ನುಡಿಯುತ್ತಾರೆ. ಮೀಸಲಾತಿಯಿಂದಾಗಿ ಈಗ ಚುನಾವಣೆ ಕಣಕ್ಕೆ ಇಳಿದಿರುವ ಮಹಿಳೆಯರು ನಮ್ಮ ಪ್ರಪಂಚ ವಿಸ್ತಾರವಾಗುತ್ತಿದೆ, ನಮ್ಮ ಪಾತ್ರ ಈಗ ಮನೆ, ಮಕ್ಕಳಿಗೆ ಮಾತ್ರ ಮೀಸಲಾಗಿಲ್ಲ ಎನ್ನುತ್ತಾರೆ.

ಇವರು ತಮ್ಮ ಸಂಘಟನೆಯನ್ನು ಸ್ವ–ಸಹಾಯ ಗುಂಪು ಎಂದು ಕರೆಯಲು ಇಚ್ಛಿಸುವುದಿಲ್ಲ. ಇವರ ಪ್ರಕಾರ ಸ್ವ–ಸಹಾಯ ಗುಂಪಿನ ತಾತ್ತ್ವಿಕ ಚಿಂತನೆ ಎಲ್ಲವನ್ನೂ ಒಳಗೊಂಡದ್ದಲ್ಲ, ಮಿತಿಯುಳ್ಳದ್ದು; ಆದರೆ 'ಕುಟುಂಬಶ್ರೀ'ಯು ಸಾಂಘಿಕ ಹಾಗೂ ಸಾಮಾಜಿಕ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ ಎನ್ನುತ್ತಾರೆ. 2,50,000 ಕುಟುಂಬಶ್ರೀ ಮಹಿಳೆಯರು ಒಟ್ಟಾಗಿ ಭೂಮಿಯನ್ನು ಲೀಸ್‌ಗೆ ಪಡೆದು ಉತ್ತಿ, ಬಿತ್ತಿ ಅವರವರ ಕುಟುಂಬಗಳಿಗೆ ಹಾಗೂ ಸ್ಥಳೀಯ ಮಾರುಕಟ್ಟೆಗೆ ಮಾರಿದ ಉದಾಹರಣೆಗಳಿವೆ. ಹೀಗಾಗಿ ಕೃಷಿಯಲ್ಲಿ ಮಹಿಳೆಯರ ಸಾಮೂಹಿಕ ಭಾಗವಹಿಸುವಿಕೆ ಹೆಚ್ಚಾಗಿದೆ. ಮಹಿಳೆಯರು ಉತ್ಪಾದಕರಾಗಿ ಉತ್ಪಾದನೆ, ಹಂಚಿಕೆ, ಸೇವನೆ ಎಲ್ಲದರ ಮೇಲೆ ನಿಯಂತ್ರಣ ಹೊಂದಬಲ್ಲವರಾಗಿದ್ದಾರೆ.

ಈಗಲೂ ಕೇರಳದ 140 ಮಂದಿಯ ಶಾಸಕಾಂಗ ಸಭೆಯಲ್ಲಿ ಏಳು ಮಂದಿ ಮಹಿಳೆಯರು ಮಾತ್ರ ಶಾಸಕರಿದ್ದಾರೆ. ಲೋಕಸಭೆಯಲ್ಲಿ ಯಾವ ಮಹಿಳೆಯೂ ಪ್ರಾತಿನಿಧ್ಯ ಪಡೆದಿಲ್ಲ. ರಾಜಕೀಯ ಪಕ್ಷಗಳಲ್ಲೂ ಉನ್ನತ ಮಟ್ಟದ ನಾಯಕತ್ವದಲ್ಲಿ ಒಬ್ಬರೋ, ಇಬ್ಬರೋ ಮಹಿಳೆಯರಿದ್ದಾರೆ ಅಷ್ಟೇ.

ಆದರೆ ಈಗ ಬದಲಾವಣೆಯ ಗಾಳಿ ಬಲವಾಗಿ ಬೀಸತೊಡಗಿದೆ. ಬಹುಶಃ ಕರ್ನಾಟಕದಲ್ಲಿ ಉಸಿರುಗಟ್ಟಿಸುವಂತಹ ರಾಜಕಾರಣದ ಮಧ್ಯೆ ನೆರೆಯ ರಾಜ್ಯದ ಕೇರಳದಲ್ಲಿ ಬೀಸುತ್ತಿರುವ ಈ ಮಹಿಳಾ ರಾಜಕಾರಣದ ಗಾಳಿ ನಮ್ಮ ರಾಜಕಾರಣದ ದಿಕ್ಕು ದೆಸೆಗಳನ್ನು ಬೇರೆ ದಿಕ್ಕಿನತ್ತ ತೆಗೆದುಕೊಂಡು ಹೋಗಬಲ್ಲದೇ ಎಂಬುದನ್ನು ಕಾದು ನೋಡಬೇಕಾಗಿದೆ. ಹಣದ ರಾಜಕೀಯದಿಂದ, ರೆಸಾರ್ಟ್ ರಾಜಕೀಯದಿಂದ, ಕುದುರೆ ವ್ಯಾಪಾರದ ರಾಜಕೀಯದಿಂದ ಬೇಸತ್ತಿರುವ ಕರ್ನಾಟಕದ ರಾಜಕಾರಣಕ್ಕೆ ನೆರೆಯ ರಾಜ್ಯದ ರಾಜಕಾರಣ ತಿಳಿವಳಿಕೆ ತರ ಬಲ್ಲದೇ? ಇಲ್ಲಿನ ಈಗಿರುವ ಪಂಚಾಯತ್ ಮಹಿಳೆಯರು ಸ್ಫೂರ್ತಿಗೊಳ್ಳಬಲ್ಲರೇ? ನಮ್ಮ ಪ್ರಶ್ನೆಗಳಿಗೆ ಉತ್ತರ ಹುಡುಕುವ ನಿಟ್ಟಿನಲ್ಲಿ ನಾವೇ ರಾಜಕಾರಣದ ವಾರಸುದಾರರಾಗಬೇಕೆಂಬ ಚಿಂತನೆ ನಮ್ಮಲ್ಲಿ ಬೆಳೆಯಬಹುದೇ ಎಂಬುದನ್ನೂ ಕಾದುನೋಡಬೇಕಾಗಿದೆ. ಭ್ರಷ್ಟಾಚಾರ ರಹಿತ, ಮೌಲ್ಯಾಧಾರಿತ, ಸ್ತ್ರೀಪರ ಕಾಳಜಿಯುಳ್ಳ ಸಮಾಜಮುಖಿಯಾದ ರಾಜಕಾರಣದ ಹೊಸಗಾಳಿಯನ್ನು ತರುವಲ್ಲಿ ಕೇರಳದ ಮಹಿಳಾ ರಾಜಕಾರಣ ಸಮರ್ಥವಾಗಬಲ್ಲುದೇ ಎಂಬುದನ್ನೂ ಕಾದು ನೋಡಬೇಕಾಗಿದೆ.

* * *

ಸುನಂದಾ ಸಿದ್ದಬಸವಯ್ಯನವರಿಗೆ ಕಾವ್ಯಾನಂದ ಪ್ರಶಸ್ತಿ ಮತ್ತು ರಾಜ್ಯೋತ್ಸವ ಪ್ರಶಸ್ತಿಗೆ ಭಾಜನರಾದ ಎಲ್ಲ ಸಾಧಕಿಯರಿಗೆ ಮಾನಸದ ಅಭಿನಂದನೆಗಳು.

ಒಳಗಿನ ಪುಟಗಳಲ್ಲಿ....



# ಭಾರತೀಯ ಮಹಿಳಾ ವಾದದ ಮೊದಲ ಧ್ವನಿ

## ಪಂಡಿತಾ ರಮಾಬಾಯಿ (1858–1922)

■ ಗಿರಿಜಾಶಾಸ್ತ್ರಿ, ಮುಂಬಯಿ

***ಭಾರತೀಯ ಸ್ತ್ರೀವಾದವು ಒಂದು ಅಬ್ಬರದ ನೆಲೆಯಿಂದ ಹೊರಟು ಈಗಷ್ಟೇ ಒಂದು ಸಮಾನಾಂತರ ನೆಲೆಯನ್ನು (equity) ಪಡೆದುಕೊಳ್ಳುತ್ತಿದೆ. ಚರಿತ್ರೆಯಲ್ಲಿ ಹೊಸದಾದ ಹೆಜ್ಜೆಗುರುತುಗಳನ್ನು ಮೂಡಿಸಲು, ಹೊಸ ಸಂಗತಿಗಳಿಗೆ ಲೋಕವನ್ನು ಆಕರ್ಷಿಸಲು ಪ್ರಾರಂಭದಲ್ಲಿ ಅಬ್ಬರದ ಅಗತ್ಯವಿರುತ್ತದೆ, ನಿಜ. ಆದರೆ ಅದು ಅಲ್ಲಿಯೇ ನಿಂತುಬಿಡುವುದಿಲ್ಲ. ಈಗ ಭಾರತೀಯ ಸ್ತ್ರೀವಾದದ ಹೊಳೆಯಲ್ಲಿ ಅನೇಕ ಪ್ರವಾಹಗಳು ಹರಿದುಹೋಗಿವೆ. ಈ ಪ್ರವಾಹದ ಕವಲುಗಳನ್ನು, ಗತಿಯನ್ನು ಬೆಳವಣಿಗೆಯನ್ನು ಅದರ ಉದ್ದೇಶವನ್ನು ಸರಿಯಾಗಿ ಬಲ್ಲವರು ಮಾತ್ರ ಅದರ ಬಗೆಗಿನ ಪೂರ್ವಗ್ರಹಗಳಿಂದ ಮುಕ್ತವಾಗಿ ಆಲೋಚಿಸ ಬಲ್ಲವರಾಗಿರುತ್ತಾರೆ. ಹಾಗೆಯೇ ಬರೆಯಬಲ್ಲವರೂ ಆಗಿರುತ್ತಾರೆ. ಅಖಂಡವಾದ ಕಾಣ್ಕೆಯುಳ್ಳ ಲೇಖಕರಿಗೆ ಮಾತ್ರ ದಕ್ಕುವಂತಹದು ಇದು. ಇಂತಹ ಒಂದು ಅಖಂಡವಾದ ಕಾಣ್ಕೆಯನ್ನು ಪಂಡಿತಾ ರಮಾಬಾಯಿಯವರು ಸುಮಾರು ನೂರೈವತ್ತು ವರುಷಗಳ ಹಿಂದೆಯೇ ಆತ್ಮಸಾತ್ ಮಾಡಿಕೊಂಡಿದ್ದರು. ಇಂದಿನ ಸ್ತ್ರೀವಾದದ ಪರಿಕಲ್ಪನೆಗೂ ಅಂದು ರಮಾಬಾಯಿಯವರಿಗಿದ್ದ ಸ್ತ್ರೀಪರ ಕಾಳಜಿಗಳಿಗೂ ನೇರವಾದ ಸಂಬಂಧವಿಲ್ಲದೇ ಇರಬಹುದು, ಆದರೂ ಅಂದಿನ ಅವರ ಕಾರ್ಯ ಚಟುವಟಿಕೆಗಳು ಇಂದಿನ ಸಾಮಾಜಿಕ ಸಂದರ್ಭಕ್ಕೆ ಬೀಜರೂಪಿಯಾಗಿ ಕೆಲಸಮಾಡಿದ್ದವು ಎಂಬುದನ್ನು ಮಾತ್ರ ಧೈರ್ಯವಾಗಿ ಹೇಳಬಹುದು. ಹತ್ತೊಂಬತ್ತನೇ ಶತಮಾನದ ಕೊನೆಯ ವೇಳೆಗೆ ಅವರು ಲಿಂಗ ಮತ್ತು ಧರ್ಮ ವ್ಯವಸ್ಥೆ ಇವೆರಡನ್ನೂ ಪೂರ್ಣದೃಷ್ಟಿಕೋನದಿಂದ ನಿರ್ವಚಿಸಿದ ರೀತಿ ಅನನ್ಯವಾದುದು. 'Indian Feminist Manifesto' ಎಂದೇ ಹೆಸರಾದ ಅವರ 'High-Caste Hindu Woman' ಕೃತಿಯಾಗಲೀ, ಅವರ 'Indian Religion' ಕೃತಿಯಾಗಲೀ, ಈ ನಿಟ್ಟಿನಲ್ಲಿ ಅವರು ಬೆಳೆಸಿಕೊಂಡ ಸಮತೋಲನ ನೆಲೆಗೆ ಸಾಕ್ಷಿಯಾಗಿವೆ. ಸಮಕಾಲೀನ ಸಂದರ್ಭದ ಸ್ತ್ರೀಪರ ಚಟುವಟಿಕೆಗಳನ್ನು ಸರಿಯಾದ ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಅದರ ಪರಂಪರೆಯ ಅರಿವು ಅವಶ್ಯಕವಾದುದು. ಈ ದೃಷ್ಟಿಯಲ್ಲಿ ಪಂಡಿತಾ ರಮಾಬಾಯಿಯವರ ಬದುಕು ಮತ್ತ ಬರಹಗಳ ಅನನ್ಯತೆಯನ್ನು ಪರಿಚಯ ಮಾಡಿಕೊಡುವುದು ಈ ಲೇಖನದ ಉದ್ದೇಶವಾಗಿದೆ.***

ರಮಾಬಾಯಿಯವರು ಮಂಗಳೂರು ಜಿಲ್ಲೆಯ ಪಶ್ಚಿಮಘಟ್ಟಗಳಲ್ಲಿನ ಗಂಗಾಮೂಲವೆಂಬ ಅರಣ್ಯಪ್ರದೇಶದಲ್ಲಿ 1858ನೆಯ ಇಸವಿ ಏಪ್ರಿಲ್ ತಿಂಗಳಿನ 23ರಂದು ಜನಿಸಿದರು. ಚಿತ್ಪಾವನ ಬ್ರಾಹ್ಮಣಕುಟುಂಬಕ್ಕೆ ಸೇರಿದ ಇವರ ತಂದೆಯವರಾದ ಅನಂತಶಾಸ್ತ್ರಿ ಡೋಂಗ್ರೆಯವರು ಸಂಸ್ಕೃತ ಹಾಗೂ ಧರ್ಮಶಾಸ್ತ್ರಗಳಲ್ಲಿ ಪ್ರಗಲ್ಭ ಪಂಡಿತರಾಗಿದ್ದರು. ತಮ್ಮ ಜೀವನಚರಿತ್ರೆ ಬರೆಯುತ್ತಾ ರಮಾಬಾಯಿಯವರು "ನನ್ನ ತಂದೆಯವರು ಸಂಪ್ರದಾಯಸ್ಥ ಬ್ರಾಹ್ಮಣರಾಗಿದ್ದು, ಜಾತಿವ್ಯವಸ್ಥೆ ಹಾಗೂ ಇತರ ಧಾರ್ಮಿಕ ನೀತಿಗಳಲ್ಲಿ ಗಾಢವಾದ ನಂಬಿಕೆಯನ್ನು ಇಟ್ಟವರಾಗಿದ್ದರೂ ತಮ್ಮದೇ ಆದ ನೆಲೆಯಲ್ಲಿ ಅವರು ಒಬ್ಬ ಸಮಾಜ ಸುಧಾರಕರೂ ಆಗಿದ್ದರು. ಓದುಬರಹಗಳಿಂದ ಸಂಸ್ಕೃತ ಭಾಷೆ ಹಾಗೂ ಪವಿತ್ರ ವೇದ ಶಾಸ್ತ್ರಗ್ರಂಥಗಳಿಂದ ಮಹಿಳೆಯರೂ ಹಾಗೂ ಶೂದ್ರರು ವಂಚಿತರಾಗಿರುವುದನ್ನು ಅವರು ಸಹಿಸುತ್ತಿರಲಿಲ್ಲ. ತಮ್ಮ ಈ ಸುಧಾರಣಾ ವಿಚಾರಗಳನ್ನು ಮನೆಯಲ್ಲಿಯೇ ತಾವೇ ಪ್ರಥಮವಾಗಿ ಪ್ರಯೋಗಿಸಿದರು. ಆ ಪ್ರಯೋಜನಕ್ಕೆ ಒಡ್ಡಿಕೊಂಡ ಮೊದಲ ಮಹಿಳೆಯೆಂದರೆ ನನ್ನ ತಾಯಿಯಾದ ಲಕ್ಷ್ಮೀಬಾಯಿಯೇ ಆಗಿದ್ದಳು". ಎಂದು ಹೇಳಿ ಕೊಂಡಿದ್ದಾರೆ. (ಮೀರಾ ಕೊಸಾಂಬಿ. ಪುಟ. 308. 2000) ಹೀಗೆ ರಮಾಬಾಯಿಯವರ ತಂದೆಯವರು ಸನಾತನ ನಿಯಮಗಳನ್ನು ಉಲ್ಲಂಘಿಸಿದ್ದುದರಿಂದ ಸಂಪ್ರದಾಯಸ್ಥ ಬ್ರಾಹ್ಮಣರ ಜೊತೆಗೆ ಅನೇಕ ವಿರೋಧಗಳನ್ನು ಕಟ್ಟಿಕೊಳ್ಳಬೇಕಾಯಿತು. ಧರ್ಮಗುರುಗಳಲ್ಲಿಗೆ ಇವರ ವಿರುದ್ಧವಾದ ಅನೇಕ ದೂರುಗಳು ಹೋದವು. ಸ್ತ್ರೀಯರಿಗೆ ವಿದ್ಯಾಭ್ಯಾಸವನ್ನು ನೀಡುವುದರ ಮೂಲಕ ಹಿಂದೂ ಧರ್ಮವನ್ನು ಉಲ್ಲಂಘಿಸುತ್ತಿರುವ ಶಾಸ್ತ್ರಿಗಳ ಮುಂದೆ ಧರ್ಮಗುರುಗಳು ಹಲವಾರು ಸವಾಲುಗಳನ್ನು ಎಸೆದರು. ಯಾವ ಧರ್ಮಶಾಸ್ತ್ರವೂ ಸ್ತ್ರೀಶಿಕ್ಷಣಕ್ಕೆ ವಿರೋಧವಾದ ನೀತಿಯನ್ನು ಬೋಧಿಸುವುದಿಲ್ಲವೆಂದು ಶಾಸ್ತ್ರಿಯವರು ಕೊಟ್ಟ ಅಭಿಪ್ರಾಯಗಳಿಗೆ ಧರ್ಮಗುರುಗಳ ಬಳಿ ಸಮರ್ಪಕವಾದ ಉತ್ತರಗಳಿರಲಿಲ್ಲ. ಮಹಿಳೆಯರು ಸುಶಿಕ್ಷಿತರಾಗಿ ತಮ್ಮದೇ ಆದ ಧರ್ಮಶಾಸ್ತ್ರಗಳನ್ನು ರೂಪಿಸಬೇಕಾದ ಅಂಶವನ್ನು ಅವರು ಸಾಬೀತು ಪಡಿಸಿದರು. ಹೀಗೆ ರಮಾಬಾಯಿಯವರ ಬಾಲ್ಯದಲ್ಲಿಯೇ ಸಿದ್ಧ

ಮಾದರಿಗಳನ್ನು ಪ್ರಶ್ನಿಸುವ, ಪ್ರತಿಭಟಿಸುವ ವಾತಾವರಣವೊಂದು ಅವರ ಮನೆಯಲ್ಲಿಯೇ ರೂಪುಗೊಂಡಿತ್ತು. ತಂದೆಯವರು ಮನೆಯಹೊರಗೆ ಕಾರ್ಯನಿರತರಾಗಿದ್ದರಿಂದ ಅವರಿಗೆ ಶಿಕ್ಷಣ ದೊರೆತದ್ದು ಅವರ ತಾಯಿಯ ಮೂಲಕವೇ. ಅವರ ಎಂಟನೆಯ ವರುಷ ಅವರಿಗೆ ದೊರೆತ ದೀಕ್ಷೆ ಮದುವೆಯಲ್ಲ, ಬದಲಾಗಿ ಶಿಕ್ಷಣ. ಸೋದರಿಯ ಬಾಲ್ಯವಿವಾಹದಿಂದಾಗಿ ಪೆಟ್ಟು ತಿಂದಿದ್ದ ಅವರ ತಂದೆ ಅಂತಹ ತಪ್ಪನ್ನು ಪುನರಾವರ್ತಿಸಲಿಲ್ಲ. ರಮಾಬಾಯಿಯವರು ಬಹಳ ಕಾಲ ಅವಿವಾಹಿತೆಯಾಗಿದ್ದರಿಂದಲೂ, ಅವರ ತಂದೆಯವರು ಸ್ತ್ರೀ ಶಿಕ್ಷಣವನ್ನು ಅನುಮೋದಿಸುತ್ತಿದ್ದ ಅಪರಾಧಕ್ಕಾಗಿಯೂ ಅವರು ತಮ್ಮ ಮದರಾಸು ಪ್ರಾಂತ್ಯದಿಂದ ಬಹಿಷ್ಕೃತರಾಗಬೇಕಾಯಿತು. ರಮಾಬಾಯಿಯವರು ತಮ್ಮ ಸಹೋದರನೊಂದಿಗೆ ಭಾರತದ ಉದ್ದಗಲ ಸಂಚರಿಸಿ ಹಿಂದೂ ಮಹಿಳೆಯರು ಅನುಭವಿಸುತ್ತಿದ್ದ ನೋವು ದುಃಖಗಳನ್ನು ಕಣ್ಣಾರೆಕಂಡರು. ಅದರಿಂದ ಕಲಕಿಹೋದ ರಮಾಬಾಯಿಯವರು ಅವರನ್ನು ಜಾಗೃತಗೊಳಿಸಬೇಕೆಂಬ ದೃಢಸಂಕಲ್ಪ ಮಾಡಿದರು. ಅಂತಹ ಮಹಿಳೆಯರ ಜೊತೆ ಸಂಪರ್ಕವನ್ನು ಸುಲಭವಾಗಿಸಿಕೊಳ್ಳಲು ಅವರು ಹಿಂದಿ ಹಾಗೂ ಬಂಗಾಳಿ ಭಾಷೆಗಳನ್ನು ಕಲಿತರು. ತಮ್ಮ ಈ ತಿರುಗಾಟ ಹಾಗೂ ಅಧ್ಯಾಪನಗಳಿಂದಾಗಿ ಅವರಿಗೆ ಹದಿನಾರು ವರುಷಗಳವರೆಗೂ ಮದುವೆಯಾಗಲು ಸಾಧ್ಯವಾಗಲಿಲ್ಲ. ಕೆಲವೇ ದಿನಗಳಲ್ಲಿ ಅವರು ತಮ್ಮ ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡರು. ಆರ್ಥಿಕ ಮುಗ್ಗಟ್ಟಿನಿಂದಾಗಿ ಅವರು ತಮ್ಮ ತಂದೆಯವರ ಶವಸಂಸ್ಕಾರವನ್ನು ತಾವೇ ಖುದ್ದಾಗಿ ನಿಂತು ಜರುಗಿಸಬೇಕಾಯಿತು. ಅವರು ದೇಶದಾದ್ಯಂತ ತನ್ನ ಸಹೋದರನೊಡನೆ ಸಂಚರಿಸುತ್ತಾ ಹಿಂದೂ ಹೆಣ್ಣುಮಕ್ಕಳು ವಿವಾಹಕ್ಕೆ ಮುನ್ನ ಸಂಸ್ಕೃತ ಹಾಗೂ ಇತರ ಭಾಷೆಗಳಲ್ಲಿ ಶಿಕ್ಷಿತರಾಗಬೇಕೆಂಬ ಪ್ರಚಾರಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಅವರು ಕಲ್ಕತ್ತೆಯನ್ನು ಪ್ರವೇಶಿಸಿದಾಗ ಸುಶಿಕ್ಷಿತ ವಲಯದಲ್ಲಿ ಬಿರುಗಾಳಿ ಎದ್ದಿತು. ಅಲ್ಲಿನ ಪಂಡಿತರ ಪರೀಕ್ಷೆಗೆ ಒಳಗಾಗಿ ಅದರಲ್ಲಿ ಗೆದ್ದು "ಸರಸ್ವತಿ" ಎನ್ನುವ ಬಿರುದನ್ನು ಪಡೆದರು. ಆನಂತರ ತಮ್ಮ ಏಕೈಕ ಸಹೋದರನನ್ನು ಕಳೆದುಕೊಂಡ ಅವರು ಒಂಟಿಯಾದರು. ಅವರ ಸಹೋದರನ ಗೆಳೆಯನಾಗಿದ್ದ ಶೂದ್ರವರ್ಗಕ್ಕೆ ಸೇರಿದ ಬಿಪಿನ್ ಬಿಹಾರಿ ಮೇಧಾವಿ ಎಂಬ ವಕೀಲರನ್ನು ಮದುವೆಯಾದರು. ಒಂದೂವರೆ ವರುಷದಲ್ಲಿಯೇ ಅವರ ದಾಂಪತ್ಯ ಜೀವನವು ಕೊನೆಗೊಂಡಿತು. ಮಗುವನ್ನು ಕಟ್ಟಿಕೊಂಡು ಅವರು ಮತ್ತೆ ಏಕಾಕಿಯಾದರು. ವಿಧವೆಯಾದ ರಮಾಬಾಯಿಯು ಹಿಂದೂ ಮಹಿಳೆಯರ ಏಳಿಗೆಯನ್ನೇ ತಮ್ಮ ಜೀವನದ ಉದ್ದೇಶವನ್ನಾಗಿ ಮಾಡಿಕೊಂಡರು. ಅವರ ಸಮಕಾಲೀನ ಮಹಿಳೆಯರ ಹೀನಾಯ ಸ್ಥಿತಿಗೆ ಪರ್ಯಾಯವಾಗಿ ರಮಾಬಾಯಿಯವರ ಮುಂದಿದ್ದ ಮಾದರಿಯೆಂದರೆ ಪ್ರಾಚೀನಭಾರತೀಯ ಹಿಂದೂ ಮಹಿಳೆಯರೇ ಆಗಿದ್ದರು. ಅವರ ವ್ಯಕ್ತಿತ್ವದಿಂದ ಆಕರ್ಷಣೆಗೊಂಡವರಲ್ಲಿ ಡಾ. ಡಬ್ಲ್ಯೂ. ಹಂಟರ್ ಅವರೂ ಒಬ್ಬರು. ಅವರು ಎಡಿನ್‌ಬರೊದಲ್ಲಿ ಮಾಡಿದ ಭಾಷಣವೊಂದರಲ್ಲಿ ಪಂಡಿತರಮಾಬಾಯಿಯವರು ತಮ್ಮ ದೇಶದ ಮಹಿಳೆಯರಿಗಾಗಿ ಮಾಡಿದ ಸೇವೆಯನ್ನು ಶ್ಲಾಘಿಸಿದ್ದರು. ಇದರಿಂದಾಗಿ ರಮಾಬಾಯಿ ಅವರ ಹೆಸರು ಮನೆ ಮಾತಾಗುವಂತಾಯಿತು.

ರಮಾಬಾಯಿಯವರು ತಮ್ಮ ದೇಶೀಯ ಮಹಿಳೆಯರ ಪ್ರಗತಿಗಾಗಿ ಪುಣೆಯಲ್ಲಿ "ಆರ್ಯ ಮಹಿಳಾ ಸಮಾಜ"ವೊಂದನ್ನು ತೆರೆದರು. ಸ್ತ್ರೀಶಿಕ್ಷಣವನ್ನು ಉತ್ತೇಜಿಸುವುದು, ಬಾಲ್ಯ ವಿವಾಹವನ್ನು ಖಂಡಿಸುವುದು ಈ ಸಂಸ್ಥೆಯ ಉದ್ದೇಶವಾಗಿದ್ದಿತು. ಜೊತೆಗೆ ಅವರು "ಸ್ತ್ರೀಧರ್ಮ ನೀತಿ" ಎನುವ ಕೃತಿಯೊಂದನ್ನು ಮರಾಠಿಯಲ್ಲಿ ಬರೆದು ಪ್ರಕಟಿಸಿದರು. ಅದರ ಮಾರಾಟದಿಂದ ಬಂದ ಹಣದಿಂದ ಅವರು ಇಂಗ್ಲೆಂಡಿಗೆ ತೆರಳಿದರು. ಅಲ್ಲಿ ಅವರು ಕ್ರಿಶ್ಚಿಯನ್ ಧರ್ಮದ ನಿಜ ಸ್ವರೂಪವನ್ನು ತಿಳಿದುಕೊಳ್ಳಲು ಪ್ರಯತ್ನಿಸಿದರು. 1886ರ ಮಾರ್ಚ್ ಹನ್ನೊಂದರಂದು ಆಕೆಯ ಸೋದರ ಸಂಬಂಧಿ ಭಾರತದ ಮೊದಲ ವೈದ್ಯೆಯಾದ ಡಾ. ಆನಂದೀಬಾಯಿ ಜೋಶಿಯವರ ಪದವಿ ಪುರಸ್ಕಾರ ಸಮಾರಂಭದಲ್ಲಿ ಭಾಗವಹಿಸಲು ಅಮೆರಿಕೆಗೆ ಹೋದರು. ಅಲ್ಲಿ ಅವರು ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಅಲ್ಲಿನ ಮಹಿಳೆಯರ ಸ್ಥಿತಿಗತಿಯನ್ನು ಭಾರತದ ಮಹಿಳೆಯರ ಸ್ಥಿತಿಗತಿಗೆ ಹೋಲಿಸುತ್ತಾ ಅದೇ ಬಗೆಯ ಜಾಗೃತಿಯನ್ನು ಇಲ್ಲಿ ತರಲು ಸಂಕಲ್ಪವನ್ನು ಮಾಡಿದರು. ಅಲ್ಲಿನ ಶಿಕ್ಷಣ ಪದ್ಧತಿಯಿಂದ ಪ್ರೇರಣೆಗೊಂಡು ಇಲ್ಲಿನ ಶಿಕ್ಷಣ ಪದ್ಧತಿಯ ಅಗತ್ಯಗಳಿಗೆ ಅನುಗುಣವಾಗಿ ರೂಪರೇಷೆಗಳನ್ನು ಸಿದ್ಧಪಡಿಸಿ ಅಮೆರಿಕೆಯ ಪುಸ್ತಕಗಳ ಅನುವಾದದಲ್ಲಿ ತೊಡಗಿದರು. ಮರಾಠಿ ಪಠ್ಯ ಪುಸ್ತಕಗಳನ್ನು ರೂಪಿಸಿದರು.

ಖಾಸಗಿ ಹಾಗೂ ಸಾರ್ವಜನಿಕ ಕ್ಷೇತ್ರದಲ್ಲಿ ರಮಾಬಾಯಿಯವರು ಮಾಡಿದ ಕೆಲಸವನ್ನು ಗುರುತಿಸುವ ಅಗತ್ಯವಿದೆ. ಮಿಶನರಿ ಮಹಿಳಾ ಶಿಕ್ಷಕಿಯಾಗಿ, ವಿಧವೆಯರ ಶಾಲೆಯ ಸ್ಥಾಪಕಿಯಾಗಿ ಕೈಗೊಂಡ ಕಾರ್ಯಗಳು ಮಹತ್ವದ್ದಾಗಿವೆ. ಜ್ಯಾತ್ಯತೀತವಾಗಿದ್ದೂ ಯಾವ ಧರ್ಮಕ್ಕೂ ಧಕ್ಕೆ ತರುವ ನಿಲುವುಗಳನ್ನು ಅವರು ತೆಗೆದುಕೊಳ್ಳಲಿಲ್ಲ. ತಮ್ಮ ಶಾಲೆಗಳಲ್ಲಿ ಯಾವುದೇ ಧರ್ಮವನ್ನು ಪಾಲಿಸಬೇಕೆಂಬ, ಇಲ್ಲವೇ ಧಾರ್ಮಿಕ ಗ್ರಂಥಗಳನ್ನು ಪಠಿಸಬೇಕೆಂಬ ನಿಯಮವಿರಲಿಲ್ಲ. ಶಾಲೆಯ ಗ್ರಂಥಾಲಯದಲ್ಲಿ ಎಲ್ಲಾ ಬಗೆಯ ಧಾರ್ಮಿಕ ಗ್ರಂಥಗಳಿಗೂ ಅವಕಾಶವಿದ್ದಿತು. ಸುಶಿಕ್ಷಿತ ಮಹಿಳೆಯರೇ ಎಲ್ಲಾ ಬಗೆಯ ಸಂಕೋಲೆಗಳನ್ನು ಬಿಡಿಸುವ ಅರ್ಹತೆಯುಳ್ಳವರು ಎಂಬುದನ್ನು ಅವರು ನಂಬಿದ್ದರು.

ರಮಾಬಾಯಿಯವರು ಸಾರ್ವಜನಿಕಕ್ಷೇತ್ರಕ್ಕೆ ಕಾಲಿಟ್ಟಮೇಲೆ ಬಹಳ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಸಂಪ್ರದಾಯದ ವಿರುದ್ಧ ತಮ್ಮ ಹೋರಾಟದ ನೆಲೆಗಳನ್ನು ರೂಪಿಸಿಕೊಂಡಿದ್ದ ಸಮಾಜಸುಧಾರಕರ ನಡುವೆಯೂ ಕೂಡಾ ಅವರ ವೈಧವ್ಯದಿಂದಾಗಿ ಅವರ ವರ್ಚಸ್ಸನ್ನು ಕಡಿಮೆಗೊಳಿಸಲಾಯಿತು. ಅಶುಭಕಾರಕವಾದ, ಹಲವು ಜನ್ಮಾಂತರಗಳ ಪಾಪದ ಫಲವಾಗಿ ವಿಧವೆಯಾಗಿರುವ ರಮಾಬಾಯಿಯು ಸುಧಾರಣೆಯ ಚಳವಳಿಗೆ ಧುಮುಕಿ ಅದನ್ನು ಅಪವಿತ್ರಗೊಳಿಸುತ್ತಿರುವರೆಂಬ ಆರೋಪಕ್ಕೆ ಗುರಿಯಾದರು. ಅಲ್ಪಕಾಲದಲ್ಲಿಯೇ ರಮಾಬಾಯಿಯು, ಮಹಾರಾಷ್ಟ್ರದ ಉಚ್ಚವರ್ಗದ ಪುರುಷರ ಕ್ಷೇತ್ರವಾದ ಸಾಮಾಜಿಕ ಸುಧಾರಣಾ ಸಂಬಂಧಿತವಾದ ಭಾಷಣಗಳಲ್ಲಿ, ಚರ್ಚಾಕೂಟಗಳಲ್ಲಿ ಭಾಗವಹಿಸಹತ್ತಿದರು. ಅಲ್ಲದೆ, ಮಹಿಳೆಯರನ್ನು ಉಪಭೋಗದ ವಸ್ತುಗಳಲ್ಲದೆ ಅವರು ಸ್ವಂತ ಪ್ರಭಾವವಿರುವ ಶಕ್ತಿಗಳೆಂದು ಜನತೆಗೆ ತೋರಿಸಿ ಕೊಡುವುದೂ ಅವರ ಮುಖ್ಯ ಉದ್ದೇಶವಾಗಿದ್ದಿತು. ಜಾತಿ ಮತ್ತು ಲಿಂಗಭೇದಗಳೆರಡು ಒಂದೇ ಸುಧಾರಣೆಯ ಎರಡು ಮುಖಗಳಾಗಿವೆ ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು. ಬ್ರಾಹ್ಮಣವರ್ಗಕ್ಕೆ ಸೇರಿದ ಮಹಿಳೆಯರೇ ಹೆಚ್ಚಾಗಿ ತುಳಿತಕ್ಕೆ ಒಳಗಾದುದರಿಂದ ಉಚ್ಚವರ್ಗದ ಪುರುಷರ ಸಮಾಜಸುಧಾರಣಾ ಚಳವಳಿಯ ಸ್ವರೂಪವು ಕೇವಲ ಲಿಂಗಾಧರಿತ ವಿವಾದಗಳಿಗೆ ಮಾತ್ರ ಸೀಮಿತವಾಗಿದ್ದಿತು.

ಮಹಾತ್ಮ ಫುಲೆಯವರು ಬ್ರಾಹ್ಮಣರ ಅಧಿಕಾರದವಿರುದ್ಧ ಪ್ರತಿಭಟಿಸಿ ಕೆಳವರ್ಗದವರ ಏಳಿಗೆಗಾಗಿ ದುಡಿದುದಲ್ಲದೆ ಸ್ತ್ರೀಪರವಾದ ಕಾಳಜಿಯನ್ನು ಹೊಂದಿದ್ದರು. 1870ರ ವೇಳೆಗೆ ಭಂಡಾರ್ಕರ್ ಮತ್ತು ಕೆ.ಟಿ. ತೆಲಂಗ್ ಅವರು ಸಮಾಜ ಸುಧಾರಣೆಯನ್ನು ಕಾನೂನು ಬದ್ಧವಾಗಿಸಲಿಕ್ಕೆ

ಸಾರ್ವಜನಿಕರ ಅಭಿಪ್ರಾಯಗಳನ್ನು ಒಟ್ಟು ಮಾಡುವುದರಲ್ಲಿ ತೊಡಗಿದರು. ಈ ಎಲ್ಲರ ಮಧ್ಯೆ ತಮ್ಮದೇ ಆದ ಸ್ವತಂತ್ರ ವಿಚಾರಗಳನ್ನು ಹೊಂದಿದ್ದ ರಮಾಬಾಯಿಯವರು ಅನೇಕ ರೀತಿಯಲ್ಲಿ ಮಹಿಳೆಯರ ಏಳಿಗೆಗಾಗಿ ದುಡಿಯುತ್ತಿದ್ದ ಸಂದರ್ಭದಲ್ಲಿ, 1880ರ ವೇಳೆಗೆ ಸುಧಾರಣಾಚಳವಳಿಯು ಒಂದು ಅನಪೇಕ್ಷಿತವಾದ ತಿರುವನ್ನು ಪಡೆದುಕೊಂಡಿತು. ಕೆ.ಟಿ. ತೆಲಂಗ್ ಮುಂತಾದವರಿಗೆ ಸುಧಾರಣಾ ಚಳವಳಿಗಿಂತ ರಾಷ್ಟ್ರೀಯ ಚಳವಳಿಗಳೇ ಮುಖ್ಯವಾಗಿದ್ದಿತು. 1890ರ ವೇಳೆಗೆ ಪ್ರವರ್ಧಮಾನಕ್ಕೆ ಬಂದ ತಿಲಕರ ರಾಜಕಾರಣದಿಂದಾಗಿ ಸುಧಾರಣಾ ಚಳವಳಿಗಳನ್ನು ಕ್ರಮೇಣ ಕಡೆಗಣಿಸಲಾಯಿತು. ತಿಲಕರು ತಮ್ಮ ಮರಾಠಿಯ "ಕೇಸರಿ" ಹಾಗೂ ಇಂಗ್ಲಿಷಿನ "ಮರಾಠ" ಪತ್ರಿಕೆಗಳ ಮೂಲಕ ತಮ್ಮ ವರ್ಚಸ್ಸನ್ನು ಬೆಳೆಸಿಕೊಂಡರು. ಪ್ರಾರಂಭದಲ್ಲಿ ಸಂಪ್ರದಾಯನಿಷ್ಠವಾದ ಇಂತಹ ಕೆಲವು ಪತ್ರಿಕೆಗಳು ರಮಾಬಾಯಿಯವರಿಗೆ ಒತ್ತಾಸೆಯನ್ನು ಕೊಟ್ಟಿದ್ದವು. ಆದರೆ ರಮಾಬಾಯಿಯವರ ಮಹಿಳಾಪರವಾದ ನಿಷ್ಠುರ ನಂಬಿಕೆಗಳು ಹಾಗೂ ಅವರ ತೀವ್ರಗಾಮಿ ಚಟುವಟಿಕೆಗಳು ಅನೇಕ ಸುಧಾರಣಾವಾದಿಗಳ ಆಕ್ಷೇಪವನ್ನು ಎದುರಿಸಬೇಕಾಯಿತು. ರಾಷ್ಟ್ರೀಯವಾದಿಗಳು ಹಾಗೂ ಸುಧಾರಣಾವಾದಿಗಳ ಘರ್ಷಣೆಯಲ್ಲಿ ರಮಾಬಾಯಿಯವರನ್ನು ತಪ್ಪಾಗಿ ಗ್ರಹಿಸಲಾಯಿತು. ಇದರಿಂದ ಭ್ರಮನಿರಸನಗೊಂಡ ರಮಾಬಾಯಿಯವರು ಅಸಹಾಯಕರಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳ್ಳಬೇಕಾಯಿತು. ರಮಾಬಾಯಿಯವರ ಮೇಲಿನ ಸುಧಾರಣಾವಾದಿಗಳ ಅಸಮಧಾನವನ್ನು ಇದು ಮತ್ತೂ ಹೆಚ್ಚಿಸಿತು. ರಮಾಬಾಯಿಯವರು ಆನಂತರ ಭಾರತೀಯ ಬಡಹೆಣ್ಣುಮಕ್ಕಳಿಗಾಗಿ, ವಿಧವೆಯರಿಗಾಗಿ ಪ್ರಮಾಣಿಕವಾಗಿ ಕೈಗೊಂಡ ಎಲ್ಲಾ ಚಟುವಟಿಕೆಗಳನ್ನೂ ಬಣ್ಣದ ಕಣ್ಣಿನಿಂದಲೇ ನೋಡಲಾಯಿತು. ರಮಾಬಾಯಿಯವರ ಚಟುವಟಿಕೆಗಳನ್ನು ವಿರೋಧಿಸುವ ಮುಂಚೂಣಿಯಲ್ಲಿದ್ದವರು ಲೋಕಮಾನ್ಯರೇ ಆಗಿದ್ದರು! ತಿಲಕರು ತಮ್ಮ ಕೇಸರಿ ಪತ್ರಿಕೆಯಲ್ಲಿ ರಮಾಬಾಯಿಯ ವಿರುದ್ಧ ಕಟುವಾದ ಟೀಕೆಗಳ ಪ್ರಹಾರವನ್ನುಮಾಡಿದರು. ಅಗರಕರ್, ರಾನಡೆ, ಭಂಡಾರಕರ್ ಮುಂತಾದವರು ಪ್ರಾರಂಭದಲ್ಲಿ ರಮಾಬಾಯಿಯವರಿಗೆ ನೆರವಾಗಿದ್ದರೂ ಮತಾಂತರದಿಂದಾಗಿ ಆಕೆ ಇದ್ದ ನೆರವುಗಳನ್ನೂ ಕಳೆದುಕೊಳ್ಳಬೇಕಾಯಿತು. ಆದರೆ ಫುಲೆಯವರು, ರಮಾಬಾಯಿಯವರ ಮತಾಂತರವು ಶೂದ್ರ ಮಹಿಳೆಯರ ಪರವಾಗಿ, ಹಿಂದೂಮತಾಂಧತೆಗೆ ಕೊಟ್ಟ ಉತ್ತರವೆಂದೇ ಶ್ಲಾಘಿಸಿ ಅವರನ್ನು ತಮ್ಮ ನಾಯಕಿಯನ್ನಾಗಿ ಪರಿಗಣಿಸಿದರು. 1882ರಂದು ಪ್ರಾರಂಭವಾದ "ಆರ್ಯ ಮಹಿಳಾ ಸಮಾಜ"ವು ಪ್ರವರ್ಧಮಾನಕ್ಕೆ ಬಂದು ಮಹಾರಾಷ್ಟ್ರದಲ್ಲೆಲ್ಲೆಡೆ ಶಾಖೆಗಳನ್ನು ಪ್ರಾರಂಭಿಸುವಾಗ ಅದು ಪುರುಷಾಧಿಪತ್ಯಕ್ಕೆ ಭಯಂಕರವಾದ ಕೊಡಲಿಯಾಗಿ ಮಾರ್ಪಟ್ಟಿದ್ದನ್ನು ಕೇಸರಿ ಪತ್ರಿಕೆಯು ಪ್ರಕಟಿಸಿತು. ಸಾಮಾಜಿಕ ಅನಿಷ್ಟಗಳ ಬಿಡುಗಡೆಯಸಾಧನವಾಗಿ ಅವರು ರಾಷ್ಟ್ರೀಯ ಚಳವಳಿಯನ್ನು ಗುರಿಯಾಗಿರಿಸಿಕೊಂಡಿದ್ದರೆ ರಮಾಬಾಯಿಯವರು ಮಹಿಳಾಪರವಾದ ಸುಧಾರಣಾ ಚಳವಳಿಗಳಲ್ಲಿ ಗುರುತಿಸಿಕೊಂಡರು. ತಮ್ಮ ವಿರುದ್ಧ ನೆಲೆಯಲ್ಲಿದ್ದ ತಿಲಕರನ್ನು ಎದುರುಹಾಕಿಕೊಳ್ಳುವುದು ರಮಾಬಾಯಿಯವರಿಗೆ ಸುಲಭವಾದ ಸಂಗತಿಯೇನಾಗಿರಲಿಲ್ಲ. "ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸುವ ಗುರುತರವಾದ ಹೊಣೆಯು ಪುರುಷರದ್ದೆಂದೂ ಅದರಲ್ಲಿ ಮಹಿಳೆಯರು ತಲೆಹಾಕುವ ಅಗತ್ಯವಿಲ್ಲವೆಂದೂ ಕೇಸರಿ ಪತ್ರಿಕೆಯು ಬಹಳ ಧೈರ್ಯವಾಗಿ ಪ್ರಕಟಿಸಿತು". (ಅದೇ. ಮುನ್ನುಡಿ) ಇಂತಹ ಎಲ್ಲಾ ವೈರುಧ್ಯಗಳ, ಪಿತೃಪ್ರಧಾನ ಒಳಸಂಚುಗಳ ಮಧ್ಯದಲ್ಲಿಯೂ ರಮಾಬಾಯಿಯವರು ತಮ್ಮ ಕಾರ್ಯಗಳಿಂದ ಹಿಂತೆಗೆಯಲಿಲ್ಲ.

### ಭಾರತೀಯ ಧರ್ಮ (Indian Religion)

ಇಡೀ ಭಾರತವರ್ಷವು ಕೆಲವರಿಗೆ ತೆರೆದ ಶೌಚಗೃಹವಾಗಿಕಂಡರೆ ಇನ್ನು ಕೆಲವರಿಗೆ ಪವಿತ್ರ ಗಂಗಾನದಿಯಾಗಿ ಕಂಡಿತು. ವಿಪುಲವಾದ ಸಾಂಸ್ಕೃತಿಕ ಹಿನ್ನೆಲೆ ಹಾಗೂ ಗಾಢವಾದ ಪಾಶ್ಚಾತ್ಯ ಪ್ರೇರಣೆಯ ಸಂಧಿಕಾಲದಲ್ಲಿ ನಿಂತವರಿಗೆ ಈ ಎರಡು ಅತಿರೇಕದ ಸ್ಥಿತಿಗಳನ್ನು ಮಾತ್ರ ಕಾಣಲಿಕ್ಕೆ ಸಾಧ್ಯವಾಯಿತು. ಆದರೆ ಈ ಎರಡು ಅತಿರೇಕ ಸ್ಥಿತಿಯು ನಡುವೆ ಒಂದು ನಿಜದಸ್ಥಿತಿ ಅಡಗಿದ್ದಿತು. ಬಹುಶಃ ಅಂತಹ ನಿಜಸ್ಥಿತಿಯನ್ನು ಕಾಣುವಂತಹ ಕಣ್ಣು ರಮಾಬಾಯಿಯವರಿಗಿದ್ದುದೇ ಅವರ ವ್ಯಕ್ತಿ ವಿಶಿಷ್ಟತೆಗೆ ಕಾರಣವಾಗಿದೆ. ಎರಡು ಕಪ್ಪು ಬಿಳುಪು ಅತಿಗಳ ಮಧ್ಯೆ ಅವರು ಬೆಳ್ಳಿಕಿರಣವಾಗಿ ಮಿಂಚಿದರು. ನಮ್ಮ ಪರಂಪರೆಯ ಬಗೆಗಿದ್ದ ಅಪರೂಪದ ಒಳನೋಟಗಳು ಬಹುಶಃ ಅಂದಿನ ಹೆಚ್ಚಿನ ಸುಧಾರಕರಿಗಾಗಲೀ, ಪುನರುತ್ಥಾನವಾದಿ ಗಳಿಗಾಗಲೀ ಇದ್ದಿರಲಿಲ್ಲವೆಂದರೆ ಅತಿಶಯೋಕ್ತಿ ಯಾಗಲಾರದು. ಅಂದಿನ ಭಾರತೀಯ ಸಂದರ್ಭವೊಂದು ಅವರನ್ನು ಸರಿಯಾಗಿ ಗ್ರಹಿಸದೇ ಹೋದುದರಿಂದಲೇ ರಮಾಬಾಯಿಯವರು ನಿರಾಶರಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳಬೇಕಾಯಿತು. ಅಲ್ಲದೆ ಅದು ಮಹಿಳೆಯರು ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದ ಪ್ರಾರಂಭದ ದಿನಗಳಾದ್ದರಿಂದ ಅಂತಹುದೊಂದನ್ನು ಯಾವ ಪುರುಷರ ಸಹಾಯವಿಲ್ಲದೇ ರಮಾಬಾಯಿಯವರು ಏಕಾಕಿಯಾಗಿ ನಿರ್ವಹಿಸುತ್ತಿದ್ದ ಸಂಗತಿಯನ್ನು ನಮ್ಮ ಪುರುಷಪ್ರಧಾನ ವ್ಯವಸ್ಥೆಯು ತಾಳಿಕೊಳ್ಳುವಂತಹುದಾಗಿರಲಿಲ್ಲ. ರಮಾಬಾಯಿಯವರ ಈ ಅಸಹಾಯಕತೆಯೇ ಅಂದಿನ ಮಹಿಳಾಪರವಾದ ಚಳವಳಿಯ ಅಸಹಾಯಕತೆಯೂ ಆಗಿದ್ದಿತು ಎಂಬುದನ್ನು ಈ ಹಿಂದೆಯೇ ಗುರುತಿಸಲಾಗಿದೆ. ಕೃಪಾ ಸತ್ಯನಾಥನಂತಹವರು ಇಡಿ ಇಡಿಯಾಗಿ ಕ್ರಿಶ್ಚಿಯನ್ ಧರ್ಮಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡುಬಿಟ್ಟಿದ್ದರೆ ರಮಾಬಾಯಿಯವರಿಗೆ ಹಿಂದೂಗಳ ಬಗೆಗಿನ ಕ್ರಿಶ್ಚಿಯನ್ ಮಿಶನರಿಗಳ ತಪ್ಪುಗ್ರಹಿಕೆಯನ್ನು ಎತ್ತಿತೋರಿಸುವಂತಹ ವಸ್ತುನಿಷ್ಠತೆಯೊಂದು ಪ್ರಾಪ್ತವಾಗಿದ್ದಿತು. ಯಾಕೆಂದರೆ ಧರ್ಮಶಾಸ್ತ್ರಗಳನ್ನು ಅವರು ಕೂಲಂಕಷವಾಗಿ ಅಧ್ಯಯನ ಮಾಡಿದ್ದವರಾಗಿದ್ದರು. ಆದ್ದರಿಂದಲೇ ಕ್ರಿಶ್ಚಿಯನ್ ಮಿಶನರಿಗಳ ಎಲ್ಲಾ ಸವಾಲುಗಳಿಗೂ ಅವರ ಹತ್ತಿರ ಉತ್ತರವಿದ್ದಿತು. ಚೆಲ್ಟನ್ ಹ್ಯಾಂ ಲೇಡೀಸ್ ಕಾಲೇಜೊಂದರ ಪತ್ರಿಕೆಯಲ್ಲಿ ಅವರು "ಇಂಡಿಯನ್ ರಿಲಿಜನ್" ಎನ್ನುವ ತಮ್ಮ ಲೇಖನದಲ್ಲಿ ಈ ವಿಷಯವನ್ನು ಸುಧೀರ್ಘವಾಗಿ ಚರ್ಚಿಸುತ್ತಾರೆ. (cheltanham ladies collage magazine No-1-xiii spring 1886) "ನನ್ನ ಅನೇಕ ಕ್ರಿಶ್ಚಿಯನ್ ಸ್ನೇಹಿತೆಯರುಗಳು ಭಾರತೀಯ ದೇಶೀಯರಿಗೆ ಯಾವ ರೀತಿಯಲ್ಲಿ ಉಪಕಾರ ಮಾಡಬೇಕೆಂಬುದರ ಬಗ್ಗೆ ಬಹಳ ಉತ್ಸುಕರಾಗಿದ್ದಾರೆ. ಬಹಳ ಸಲ ಭಾರತೀಯರನ್ನು ಕ್ರಿಶ್ಚಿಯನ್ನರನ್ನಾಗಿ ಮತಾಂತರಗೊಳಿಸುವುದರ ಬಗೆಗೆ ನನ್ನಲ್ಲಿ ಅನೇಕ ಪ್ರಶ್ನೆಗಳನ್ನು ಕೇಳುತ್ತಲೇ ಇರುತ್ತಾರೆ. ಆದರೆ ಅವರಿಗೆ ಬೇಕಾದಂತೆ ಉತ್ತರಿಸಲು ನನಗೆ ಸಾಧ್ಯವಿಲ್ಲವಾಗಿದೆ. ಕಾರಣ ಹಿಂದೂ ಧರ್ಮ ಹಾಗೂ ಅದರ ತಾತ್ವಿಕತೆಯ ಬಗ್ಗೆ ಅವರು ಅಜ್ಞರಾಗಿದ್ದಾರೆ. ...ಉತ್ತರ ಅಮೇರಿಕನ್ನರನ್ನು, ಮಧ್ಯ ಏಶಿಯಾದ ಆರ್ಯಜನಾಂಗದವರನ್ನು, ಆಫ್ರಿಕಾ, ಆಸ್ಟ್ರೇಲಿಯಾ ಹಾಗೂ ಪೆಸಿಫಿಕ್ ದ್ವೀಪದ ವಾಸಿಗಳೆಲ್ಲರನ್ನೂ ಅವರು "ದೇಶೀಯರೆಂಬ" ಒಂದೇ ವರ್ಗಕ್ಕೆ

ಸೇರಿಸಿಬಿಟ್ಟಿದ್ದಾರೆ. ಈ ಸಂಸ್ಕೃತಿಗಳ ಬಗೆಗೆ ಅವರಿಗಿರುವ ಅಜ್ಞಾನವೇ ಅವುಗಳಲ್ಲಿರುವ ವೈವಿಧ್ಯವನ್ನು ಕಾಣದಂತೆ ಮಾಡಿಬಿಟ್ಟಿದೆ. ಈ ಎಲ್ಲಾ ಜನಾಂಗಗಳೂ ಅವರ ಕಣ್ಣಿಗೆ ಬುದ್ಧಿಹೀನ, ಸಂಸ್ಕೃತಿಹೀನ ಜನಾಂಗವಾಗಿ ಕಂಡಿವೆ". (ಮೀರಾ ಕೊಸಾಂಬಿ. ಪು. 119. 2000) ಹೀಗೆ ದೇಶೀಯರ ಆಲೋಚನಾ ವಿಧಾನಗಳಿಗೆ ಪ್ರವೇಶವೇ ಸಾಧ್ಯವಾಗದಂತಹ ಮಿಶನರಿಗಳು ದೇಶೀಯರನ್ನು ಸುಸಂಸ್ಕೃತಗೊಳಿಸುವಂತಹ ದೊಡ್ಡ ತಪ್ಪನ್ನು ಮಾಡುತ್ತಿರುವುದು ಅವರಿಗೆ ಬಹಳ ದುಃಖವನ್ನುಂಟುಮಾಡಿದೆ.

> **"ದೇಶೀಯರನ್ನು ಸುಲಭವಾಗಿ ಕ್ರಿಶ್ಚಿಯನ್ನರನ್ನಾಗಿ ಮಾಡಿಬಿಡಬಹುದೆಂಬ ಶೋಕಿಯು ಕ್ರಿಶ್ಚಿಯನ್ ಮಹಿಳೆಯರಲ್ಲಿ ಬಹಳವಾಗುತ್ತಿದೆ. ಆದರೆ ಅದು ಅಷ್ಟು ಸುಲಭವಾದುದೇನಲ್ಲ. ಈ ಪ್ರಸಂಗವು ತದ್ವಿರುದ್ಧವಾದರೆ ಹೇಗೆ? ಉದಾಹರಣೆಗೆ ಭಾರತೀಯ ಮಹಿಳೆಯೊಬ್ಬಳು ಇಂಗ್ಲಿಷರನ್ನು ಹಿಂದೂಗಳನ್ನಾಗಿ ಮತಾಂತರಿಸಬೇಕೆಂಬ ಸ್ಫೂರ್ತಿಯಿಂದ ಕ್ರಿಶ್ಚಿಯಾನಿಟಿಯ ಯಾವ ಗಂಧ ಗಾಳಿಯಿಲ್ಲದೆ, ಬರೇ ಅಜ್ಞಾನದಿಂದ ತನ್ನದೇ ಧರ್ಮದ ಆಲೋಚನೆಗಳ ಪೂರ್ವಗ್ರಹದಿಂದ ಬಲವಾಗಿ ಪೀಡಿತವಾಗಿ ಹೊರಟಪಕ್ಷದಲ್ಲಿ ವೇದಗಳನ್ನಾಗಲೀ, ಹಿಂದೂಧರ್ಮ ಗ್ರಂಥಗಳನ್ನಾಗಲೀ ಯಾವೊಬ್ಬ ಇಂಗ್ಲಿಷನಿಗಾದರೂ ಒಪ್ಪಿಕೊಳ್ಳಲು ಸಾಧ್ಯವಿದೆಯೇ? ಯಾವ ರೀತಿಯಲ್ಲಿ ಅವಳ ನಂಬಿಕೆಗಳು ತಮ್ಮ ನಂಬಿಕೆಗಳಿಗಿಂತ ಶ್ರೇಷ್ಠವೆಂಬುದನ್ನು ಸಾಬೀತು ಪಡಿಸಲು ಕ್ರಿಶ್ಚಿಯನ್ನರು ಅವಳನ್ನು ಪ್ರಶ್ನಿಸಲಾರರೇ? ಕ್ರಿಶ್ಚಿಯನ್ ಧರ್ಮದ ಬಗ್ಗೆ ಏನೂ ಅರಿಯದ ನಮ್ಮ ಕಾಲ್ಪನಿಕ ಪಂಡಿತರಂತೆ ತಮ್ಮದನ್ನು ಮಾತ್ರ ಬಹಳ ಶ್ರೇಷ್ಠವೆಂದು ನಂಬಿರುವ ಮಹಿಳಾ ಮಿಶನರಿಗಳೂ ಇದ್ದಾರೆ".**

ಎಂದು ರಮಾಬಾಯಿಯವರು ಬ್ರಿಟಿಷರ ಶ್ರೇಷ್ಠತೆಯ ಭ್ರಮೆಯನ್ನು ನುಚ್ಚುನೂರು ಮಾಡುವಂತಹ ತರ್ಕವನ್ನು ವ್ಯಕ್ತಪಡಿಸುತ್ತಾರೆ. ಈ ಭ್ರಮೆಯಿಂದ ಹಿಂದೂಧರ್ಮದ ಅನುಯಾಯಿಗಳು ಕೂಡಾ ಪಾರಾಗಬೇಕೆಂಬ ಸೂಚನೆಯನ್ನು ಇದು ಸೂಕ್ಷ್ಮವಾಗಿ ಕೊಡುತ್ತದೆ. ಇಂತಹ ಸತ್ಯವನ್ನು ಮಿಶನರಿಗಳ ನೆಲದಲ್ಲಿಯೇ ಅವರಿಗೆ ರಾಚುವಂತೆ ವ್ಯಕ್ತಪಡಿಸಿದ ರಮಾಬಾಯಿಯವರ ಧೈರ್ಯವನ್ನು ಮೆಚ್ಚದೇ ಹೋಗಲು ಸಾಧ್ಯವಿಲ್ಲ. ರಮಾಬಾಯಿಯವರು ತಮ್ಮ ಹಿಂದೂಗ್ರಂಥಗಳಲ್ಲಿ ವ್ಯಕ್ತವಾಗಿರುವ ಸುಂದರ ಸತ್ಯವನ್ನು ಅರಿಯಬೇಕು ಎಂಬ ಗ್ರಹಿಕೆಯಿಂದ ತಮ್ಮ 'ಇಂಡಿಯನ್ ರಿಲಿಜನ್' ಲೇಖನದಲ್ಲಿ ಭಾರತೀಯ ವೇದ, ಶಾಸ್ತ್ರ, ಪುರಾಣ, ಉಪನಿಷತ್, ಯೋಗಸೂತ್ರ, ವೇದಾತ ಮುಂತಾದುದರ ಮೇಲಿನ ಅನೇಕ ಗ್ರಂಥಗಳನ್ನು ಅವುಗಳ ಕಾಲಾನುಸಾರ ವಿಭಾಗೀಕರಿಸಿ ಸ್ಥೂಲವಾದ ಪರಿಚಯವನ್ನು ಮಾಡಿಕೊಡುತ್ತಾರೆ. ಇದು ಕೇವಲ ಪರಕೀಯರಿಗೆ ಮಾತ್ರವಲ್ಲ ಭಾರತೀಯರಿಗೂ ಒಂದು ಕೈಪಿಡಿಯಾಗಿದೆ. ಹಿಂದೂ ಜನರ ಬಹು ದೇವೋಪಾಸನೆಯ ಹಿಂದೆ, ಋಗ್ವೇದ ಕಾಲದ ಏಕದೈವೋಪಾಸನೆಯ ಕಲ್ಪನೆಯನ್ನು ಎತ್ತಿಹಿಡಿಯುತ್ತಾರೆ. ಅಲ್ಲಿ ಅನುಯಾಯಿಗಳ ಕಲ್ಪನೆಗೆ ತಕ್ಕಂತೆ ದೇವರ ಸ್ವರೂಪ ಹಾಗೂ ನಾಮಗಳು ಬದಲಾದ ಬಗೆಯನ್ನು ವೈಜ್ಞಾನಿಕವಾಗಿ ಚರ್ಚಿಸುತ್ತಾರೆ. ಜ್ಯೂ ಗಳಿಗೆ ಜ್ಯೂವಾಗಿ ಕಾಣಿಸಿಕೊಂಡ ಸಂತಪಾಲನು ಅವರ ಜೊತೆ ಚರ್ಚಿಸಿದ ಹಾಗೆ, ತಾವು ಹಿಂದೂಗಳ ಬಹುದೈವತೋಪಾಸನೆಯಲ್ಲಿ (ವೇದಗಳಲ್ಲಿ) ಅಡಗಿರುವ ಏಕದೈವತೋಪಾಸನೆಯ ಕುರಿತಾಗಿ ಚರ್ಚಿಸಬೇಕಾಗಿದೆ ಎಂದು ಹೇಳುತ್ತಾ, ಕ್ರೈಸ್ತನ ಉಪದೇಶಗಳಂತೆ ಪ್ರಾಚೀನ ಋಷಿಗಳ ವಾಕ್ಕುಗಳೂ ಅಖಂಡವಾಗಿವೆ, ಆದರೆ ಅವು ಬರುಬರುತ್ತಾ ಅವರ ಶಿಷ್ಯರುಗಳ ಅಂಧಶ್ರದ್ಧೆ ಹಾಗೂ ಮೂರ್ತಿಪೂಜೆಯ ವ್ಯಾಖ್ಯಾನದ ಮೊತ್ತವಾಗಿದ್ದುದನ್ನು ಗಮನಿಸಬೇಕಾಗಿರುವುದನ್ನು ಅವರು ಒತ್ತಿ ಹೇಳುತ್ತಾರೆ. ಒಂದೇಶಕ್ತಿಯ ವಿವಿಧರೂಪಗಳೆನ್ನುವ ಹಿಂದೂಗಳ ಕಲ್ಪನೆಯು, ಕ್ರೈಸ್ತನನ್ನು ಒಬ್ಬ ದೇವರ ಮಗನನ್ನಾಗಿ ಮಾತ್ರ ಗ್ರಹಿಸಿ, ಅವಧೂತನನ್ನಾಗಿ ಕಂಡ ಕ್ರಿಶ್ಚಿಯನ್ ಧರ್ಮದ ಕಲ್ಪನೆಗೆ ಎಟುಕಲಾರದು ಎಂದು ಅವರು ಸ್ಪಷ್ಟವಾಗಿ ಹೇಳುತ್ತಾರೆ. ಹಿಂದೂಗಳು ಎಂದೆಂದಿಗೂ ಶಾಶ್ವತವಾದುದ್ದರ ಬಗ್ಗೆ ನಂಬಿಕೆಯನ್ನು ಹೊಂದಿದ್ದವರು. ವೇದವನ್ನು ಪ್ರಮಾಣವೆಂದು ಬಗೆದವರಿಗೆ 'ಪಾಪದ ಬಗೆಗಿನ ಪ್ರಜ್ಞೆ'ಯೂ ಕ್ಷಮೆಯ ಅರಿವೂ ಚೆನ್ನಾಗಿಯೇ ಇದ್ದಿತೆಂದೂ, ಈ ಐಹಿಕ ಜಗತ್ತಿನಲ್ಲಿ ಅವರು 'ಕರುಣೆಗೆ' ಕೊಟ್ಟ ಪ್ರಾಶಸ್ತ್ಯವು ಸ್ವರ್ಗ ಸುಖಕ್ಕಿಂತಲೂ ಮಿಗಿಲಾಗಿದ್ದುದರ ಋಗ್ವೇದ ಸಾರವನ್ನು ರಮಾಬಾಯಿಯವರು ಎತ್ತಿಹಿಡಿಯುತ್ತಾರೆ.

ಕೊನೆಗೆ ಮೂರ್ತಿ ಪೂಜೆಯ ಕಲ್ಪನೆಯು ಭಾರತೀಯ ಇತಿಹಾಸದಲ್ಲಿ ರೂಪುಗೊಂಡುದರ ಹಿಂದಿನ ತರ್ಕವನ್ನು ಚರ್ಚಿಸುತ್ತಾ, ಅದು ಹೇಗೆ ಅನುಭಾವಿಕವಾದ ಬೃಹತ್ತಾದುದೊಂದರ ಪರಿಕಲ್ಪನೆಗೆ ಅಡ್ಡ ಬರುತ್ತದೆ ಎಂಬುದನ್ನು ವಿವರಿಸುತ್ತಾ "ಮಿಥ್ಯವಾದುದಕ್ಕೆ ಅಂಟಿಕೊಳ್ಳುವುದು, ಹುಸಿಯಾದುದನ್ನು ಅವಲಂಬಿಸುವುದು" ಅಪಾಯಕಾರಿಯಾದುದೆಂದೂ ಅಂತಹ ಅನರ್ಥದಲ್ಲಿ ತೊಡಗುವುದು (ಮೂರ್ತಿ ಪೂಜೆಯಂತಹ) ದೇವರ ವಿರುದ್ಧ ಎಸಗುವ ಪಾಪವಾಗಿದೆ ಎಂಬುದನ್ನು ಅವರು ಹಿಂದೂಗಳಿಗೆ ತಿಳಿಯಪಡಿಸುತ್ತಾರೆ. ರಮಾಬಾಯಿಯವರು ಮೂರ್ತಿಪೂಜೆಯ ಬಗೆಗೆ ಕೊಟ್ಟ ಈ ಒಂದು ವ್ಯಾಖ್ಯಾನದ ಹಿಂದೆ ಅವರ ಮೇಲಾದ ಕ್ರೈಸ್ತ ಧರ್ಮದ ಪ್ರಭಾವವನ್ನೂ ಕಾಣಬಹುದಾಗಿದೆ. ಅಲ್ಲದೆ ಭಾರತೀಯ ಸಂಸ್ಕೃತಿಯಲ್ಲಿ ವೇದಕಾಲೀನ ವಿಶ್ವಮಾನವೀಯ ಸತ್ಯಗಳನ್ನು ಕ್ರಮೇಣ ಅನೇಕ ಐತಿಹಾಸಿಕ ಸ್ವಾರ್ಥಗಳಿಗಾಗಿ ತಿರುಚಿಹಾಕಿದ ಕಾರಣದಿಂದಲೇ ಅದು ಅವನತಿಯತ್ತ ಸಾಗುತ್ತಿದೆ ಎಂದು ಅವರು ನಂಬುತ್ತಾರೆ. ಹಿಂದೂ ಧರ್ಮವು ತನ್ನ ತಾತ್ವಿಕ ನೆಲೆಗಳಿಂದ ತಪ್ಪಿಸಿಕೊಂಡು ಕೇವಲ ಆಚರಣೆಯ ನೆಲೆಗೆ ಇಳಿದುದರ ನಡುವಿನ ವ್ಯತ್ಯಾಸವನ್ನು ರಮಾಬಾಯಿಯವರು ಸ್ಪಷ್ಟವಾಗಿ ಗ್ರಹಿಸಬಲ್ಲವರಾಗಿದ್ದರು. ಹಿಂದೂ ಧರ್ಮವು ಹೀನಾವಸ್ಥೆಗೆ ಇಳಿದುದರ ದ್ಯೋತಕವಾಗಿ ಮಹಿಳೆಯರ ಸ್ಥಾನ ಮಾನಗಳಲ್ಲಿ ಅವನತಿಯುಂಟಾಗುತ್ತಿದೆಯೆಂದು ಅವರು ಸಿದ್ಧಪಡಿಸಬಲ್ಲವರಾಗಿದ್ದರು.

### ಉಚ್ಚ ಜಾತಿಯ ಹಿಂದೂ ಮಹಿಳೆ (High Caste Hindu Woman) :

ರಮಾಬಾಯಿಯವರಿಗೆ ಬಹಳ ಜನಪ್ರಿಯತೆಯನ್ನು ತಂದಿತ್ತ ಈ ಕೃತಿಯಲ್ಲಿ, ಭಾರತದಲ್ಲಿ ಹೆಚ್ಚು ತುಳಿತಕ್ಕೆ ಒಳಗಾದ ಉಚ್ಚವರ್ಗದ ಮಹಿಳೆಯರ ಕುರಿತಾದ ಪ್ರಾಮಾಣಿಕ ಕಳಕಳಿಯು ವ್ಯಕ್ತವಾಗಿದೆ. ಹಿಂದೂಗಳ ಬಗೆಗಿನ ಮಿಶನರಿಗಳ ಪೂರ್ವಾಗ್ರಹಗಳನ್ನು ಅವರ "ಭಾರತೀಯ ಧರ್ಮ" ಎನ್ನುವ ಲೇಖನವು ವ್ಯಕ್ತಪಡಿಸಿದರೆ, ಉಚ್ಚವರ್ಗದ ಹಿಂದೂ ಮಹಿಳೆಯರ ಕುರಿತಾದ ಈ ಕೃತಿಯಲ್ಲಿ, ಹಿಂದೂ ಧರ್ಮದ ಮಹಿಳೆಯರ ಬಗೆಗಿನ ತಪ್ಪು ಗ್ರಹಿಕೆಗಳು ಬ್ರಿಟಿಷರ ಆಧುನಿಕ ದೃಷ್ಟಿಗೆ ಬಿದ್ದು ಅವು ಸುಧಾರಿಸಲಿ ಎಂಬ ದೂರದ ಆಸೆಯೂ ರಮಾಬಾಯಿಯವರಿಗಿದ್ದಿತು ಎಂಬುದನ್ನು ತಿಳಿಯಪಡಿಸುತ್ತದೆ. ಆದುದರಿಂದಲೇ ಅವರು ಒಂದು ಸಾರ್ವಜನಿಕ ಕೋರಿಕೆಯನ್ನು ಈ ಕೃತಿಯ ಕೊನೆಗೆ "The appeal" ಎನ್ನುವ ಶೀರ್ಷಿಕೆಯಡಿ ಹೇಳಿಕೊಳ್ಳುತ್ತಾರೆ. **"ನನ್ನ ಈ ಪುಸ್ತಕವನ್ನು ಓದಿದ ನೀವೆಲ್ಲರೂ ನನ್ನ ದೇಶದ ಮಹಿಳೆಯರನ್ನು ಅವರ ಜೀವನ ಪರ್ಯಂತ ದಹಿಸುತ್ತಿರುವ**

**ಕಷ್ಟಗಳಿಂದ, ದಾಸ್ಯದಿಂದ ಮುಕ್ತಗೊಳಿಸಲು ಒಂದು ಸಮಾನವಾದ ಉದ್ದೇಶದಿಂದ ಉತ್ತೇಜಿತರಾಗಿ ಜಾಗೃತರಾಗಲಾರಿರ? ಸ್ನೇಹಿತರೇ, ಹಿತಚಿಂತಕರೇ, ಶಿಕ್ಷಕರೇ ...ನಿಮ್ಮನ್ನು ಬೇಡಿಕೊಳ್ಳುತ್ತಿದ್ದೇನೆ, ನಿಮಗೇನಾದರೂ ನಿಮ್ಮ ಸಹಜೀವಿಗಳಲ್ಲಿ ಅನುಕಂಪವಿದ್ದಲ್ಲಿ ನನ್ನ ಭಾರತೀಯ ಹೆಣ್ಣುಮಕ್ಕಳ ಅಳಲು, ಅದು ಎಷ್ಟೇ ಕ್ಷೀಣವಾಗಿದ್ದರೂ ನಿಮ್ಮ ಕಿವಿಗಳನ್ನು ಅದು ತಲುಪಲಾರದೇ? ಮಾನವೀಯತೆಯ ಹೆಸರಿನಲ್ಲಿ, ಎಲ್ಲದಕ್ಕಿಂತ ಹೆಚ್ಚಾಗಿ ದೇವರ ಹೆಸರಿನಲ್ಲಿ ನಾನು ನಿಮಗೆ ಕೋರಿಕೊಳ್ಳುತ್ತಿದ್ದೇನೆ ಅಮೇರಿಕೆಯ ಸ್ತ್ರೀ ಪುರುಷರೇ, ಜಾತಿ ಜನಾಂಗ ಭಾಷೆ ದೇಶಗಳನ್ನು ಗಣನೆಗೆ ತಂದುಕೊಳ್ಳದೆ ಶೀಘ್ರವಾಗಿ ನಿಮ್ಮ ಸಹಾಯ ಹಸ್ತವನ್ನು ಚಾಚಲಾರಿರಾ?"** ಎಂದು ಬೇಡಿಕೊಳ್ಳುತ್ತಾರೆ. (ಅದೇ. ಪು. 179) ಈ ಕೃತಿಯಲ್ಲಿ ಹಿಂದೂ ಧರ್ಮದ ಉಚ್ಚಜಾತಿಯ ಮಹಿಳೆಯರ ಸ್ಥಾನಮಾನಗಳನ್ನು ವಿವರವಾಗಿ ಅವರ ಬಾಲ್ಯ, ಯೌವನ, ಮದುವೆ, ವೈಧವ್ಯ, ತಾಯ್ತನದ ಪರಿಕಲ್ಪನೆಗಳು ಮುಂತಾದ ಪ್ರತ್ಯೇಕ ಭಾಗಗಳಲ್ಲಿ ವ್ಯಕ್ತಪಡಿಸಿದ್ದಾರೆ. ಕಲಿತ ವಿದ್ಯಾವಂತ ಪಂಡಿತರೆನ್ನುವವರು ಮನುಧರ್ಮಶಾಸ್ತ್ರದಲ್ಲಿನ ತಮಗೆ ಲಾಭದಾಯಕವಾದ ಅಂಶಗಳನ್ನು ಮಾತ್ರ ಆಯ್ಕೆಮಾಡಿಕೊಂಡು ಹೇಗೆ ಪಿತೃ ಪ್ರಧಾನ ವ್ಯವಸ್ಥೆಯನ್ನು ಗಟ್ಟಿಗೊಳಿಸುತ್ತಾ ಬಂದರು ಎಂಬುದನ್ನು ಹೇಳುತ್ತಾರೆ. ಭಾರತೀಯ ಉಚ್ಚವರ್ಗದ ಹೆಣ್ಣುಗಳ ಅನೇಕ ಘಟ್ಟಗಳನ್ನು ಮನುಸ್ಮೃತಿಯ ಆಧಾರದೊಂದಿಗೆ ಇಲ್ಲಿ ಚರ್ಚಿಸಲಾಗಿದೆ. ಹೆಣ್ಣುಭ್ರೂಣಹತ್ಯೆಯು ಧಾರ್ಮಿಕವಾಗಿ ಪರವಾನಗಿಯನ್ನು ಪಡೆದು ಕೊಂಡಿರದಿದ್ದರೂ, ಸಾಮಾನ್ಯವಾಗಿ ಸಾಮಾಜಿಕ ಶಿಕ್ಷೆಗೆ ಅರ್ಹವಾದು ದಾಗಿರಲಿಲ್ಲ. 1802ರ ಹೊತ್ತಿಗೆ ಬ್ರಿಟಿಷ್ ಸರಕಾರವು ಇಂತಹ ಹೀನಕೃತ್ಯಗಳ ವಿರುದ್ಧ ಕಾನೂನನ್ನು ಜಾರಿಗೆ ತಂದಿತು. ನಲವತ್ತು ವರುಷಗಳ ನಂತರ ಮೇಜರ್ ಲುಡ್ಲೋ ಎನ್ನುವ ಇಂಗ್ಲಿಷ್ ದಯಾಳು ಒಬ್ಬನು ವರದಕ್ಷಣೆ ಹಾಗೂ ಅದ್ದೂರಿ ವಿವಾಹವನ್ನು ರದ್ದುಪಡಿಸುವ ಕಾನೂನೊಂದನ್ನು ಉಪ-ಸ್ವತಂತ್ರ ರಾಜ್ಯಗಳಲ್ಲಿ ಜಾರಿಗೆ ತಂದಿದ್ದನು. ಹೀಗಿದ್ದಾಗ್ಯೂ ರಮಾಬಾಯಿಯವರು ಬರೆಯುತ್ತಾರೆ. **"ಅನಗತ್ಯ ಖರ್ಚುವೆಚ್ಚಗಳನ್ನು ಕಾನೂನಿಂದ ತಡೆಯಬಹು ದಾದರೂ ಶತ ಶತಮಾನಗಳಿಂದ ಜನರ ಹೃದಯದಲ್ಲಿ ಆಳವಾಗಿ ಬೇರೂರಿರುವ ಧಾರ್ಮಿಕ ಆಚರಣೆಗಳನ್ನು ಹೊರಗಿನ ಕಾನೂನುಗಳು ನಿರ್ಮೂಲನ ಮಾಡಲು ಸಾಧ್ಯವಿಲ್ಲ'.** (ಅದೇ) ಅವರು ಮುಂದುವರೆದು **"1870ರ ಜನಗಣತಿಯ ಪ್ರಕಾರ ಅಮೃತಸರದ ಶಹರದೊಳಗೆ ಮುನ್ನೂರು ಶಿಶುಗಳನ್ನು ಒಂದೇ ವರುಷದಲ್ಲಿ ತೋಳಗಳು ಕೊಂಡೊಯ್ದವು! ಆಶ್ಚರ್ಯವೆಂದರೆ ಆ ಮುನ್ನೂರು ಶಿಶುಗಳೂ ಹೆಣ್ಣುಶಿಶುಗಳೇ ಆಗಿದ್ದವು".** (ಅದೇ ಪು. 141) ಎಂದು ಹೆಣ್ಣು ಶಿಶುಗಳ ಬಗೆಗಿರುವ ಸಾಮಾಜಿಕ ಅನ್ಯಾಯವನ್ನು ಬಯಲಿಗೆಳೆಯುತ್ತಾರೆ. ಅಲ್ಲದೆ ಸ್ತ್ರೀಯರ ಸಂಖ್ಯೆಯು ಕಡಿಮೆಯಾಗಲು ಉಳಿದ ಪೂರಕವಾದ ಕಾರಣಗಳೆಂದರೆ ಸ್ತ್ರೀ ಸಂಬಂಧಿತ ರೋಗಗಳಿಗೆ ಸಿಕ್ಕ ಅನಾದರಣೆ ಹಾಗೂ ಅಲಕ್ಷಿತ ಉಪಚಾರಗಳು, ನೈರ್ಮಲ್ಯದ ಕೊರತೆ ಇವುಗಳೆ ಆಗಿದ್ದುದನ್ನು ಚರ್ಚಿಸುತ್ತಾರೆ. ಬಾಲ್ಯವಿವಾಹದ ಪದ್ಧತಿ, ಸ್ತ್ರೀಯರ ವೈವಾಹಿಕ ಹಕ್ಕುಗಳು ಹೇಗೆ ಬ್ರಿಟಿಷ್ ರಾಜ್ಯದಲ್ಲಿಯೂ ಮನುವಿನ ಪೂರ್ವಾಗ್ರಹಗಳಿಂದ ತಪ್ಪಿಸಿಕೊಳ್ಳಲು ನಿಷ್ಫಲವಾದವು ಎಂಬುದನ್ನು ಪ್ರಸಿದ್ಧ ರಖಮಾಬಾಯಿಯ ಮೊಕದ್ದಮೆಯ ಮೂಲಕ ವಿವರಿಸುತ್ತಾರೆ. ರಮಾಬಾಯಿಯ ಹತ್ತಿರದ ಸಂಬಂಧಿಯಾದ ರಖಮಾಳು ಬಾಲ್ಯದಲ್ಲಿಯೇ ವಿವಾಹಿತಳಾಗಿದ್ದರೂ ವಿದ್ಯಾವಂತಳಾಗಿ ವಯಸ್ಸಿಗೆ ಬಂದ ಹೊತ್ತಿಗೆ ಅವಿದ್ಯಾವಂತ ಪತಿಯೊಡನೆ ಸಂಸಾರಮಾಡಲು ನಿರಾಕರಿಸಿದಾಗ ಅವಳ ಪತಿಯಾದ ದಾದಾಜಿಯು ಅವಳ ವಿರುದ್ಧವಾಗಿ ಮೊಕದ್ದಮೆಯನ್ನು ಹೂಡಿದನು. ಪಿನ್ಹೆಯೆನ್ನುವ ನ್ಯಾಯವಾದಿಯು ತೀರ್ಪನ್ನು ರಖಮಾಳ ಪರವಾಗಿ ಇತ್ತುದರಿಂದಾಗಿ ಕ್ರೋಧಗೊಂಡ ಅನೇಕ ಸಂಪ್ರದಾಯವಾದಿ ಹಿಂದೂಗಳು ಹಣ ಸಂಗ್ರಹಿಸಿ ಮತ್ತೆ ಕೋರ್ಟಿನಲ್ಲಿ ದಾವೆ ಹೂಡಿದರು. ಕೇಸರಿ ಪತ್ರಿಕೆಯಂತೂ ಹಿಂದೂಧರ್ಮದಲ್ಲಿ ಹಸ್ತಕ್ಷೇಪ ಮಾಡುತ್ತಿರುವುದರ ಬಗ್ಗೆ ಬ್ರಿಟಿಷ್ ಸರಕಾರವನ್ನು, ಖಂಡಿಸಿದುದಲ್ಲದೇ ಸ್ತ್ರೀಯರಶಿಕ್ಷಣವೇ ಇದಕ್ಕೆಲ್ಲ ಮೂಲವೆಂದು ಜರೆಯಿತು. ಇದು ರಖಮಾಳಿಗೆ ಬೆಂಬಲವಾಗಿದ್ದ ರಮಾಬಾಯಿಯ ಮೇಲೆ ತಿಲಕರು ಮಾಡಿದ ವೈಯಕ್ತಿಕ ಆಕ್ರಮಣವೇ ಆಗಿದ್ದಿತು. ರಖಮಾಳು ತನ್ನ ಮೊಕದ್ದಮೆಯಲ್ಲಿ ಸೋತ ಸಂದರ್ಭದಲ್ಲಿ, 18ರ ಮಾರ್ಚ್ 1887ರಂದು ರಮಾಬಾಯಿಗೆ ಬರೆದ ಪತ್ರವೊಂದನ್ನು ಉಲ್ಲೇಖಿಸುತ್ತಾರೆ. "ನಾಲ್ಕು ಸಾವಿರ ವರುಷಗಳ ಈ ಉತ್ಕೃಷ್ಟ ಪರಂಪರೆಯಲ್ಲಿ ಸುಶಿಕ್ಷಿತ ನಾಗರೀಕರೆಂದೂ ಹೇಳಿಕೊಳ್ಳುವ ಪುರುಷರು ಅಮಾನವೀಯ ವಾದ ಕಾನೂನನ್ನು ಎತ್ತಿಹಿಡಿದಿದ್ದಾರೆ. ನನ್ನನ್ನು ಒಲ್ಲದ ಗಂಡನ ಜೊತೆಗೆ ಬದುಕಲು ಒತ್ತಡವನ್ನು ಹೇರುತ್ತಿರುವುದಲ್ಲದೆ ಕೋರ್ಟಿನ ಖರ್ಚನ್ನೂ ತುಂಬಬೇಕೆಂದು ಹೇಳುತ್ತಿದ್ದಾರೆ. ನ್ಯಾಯ ಸಮಾನತೆ ಯನ್ನು ಕೊಚ್ಚಿಕೊಳ್ಳುವ ನಿಷ್ಪಕ್ಷಪಾತವಾದ ಬ್ರಿಟಿಷ್ ಸರಕಾರದಲ್ಲಿ ಅಲ್ಲವೆ ನಾವಿರುವುದು? ತಾನೂ ಒಬ್ಬ ಹೆಣ್ಣಾದ ವಿಕ್ಟೋರಿಯಾಳ ಪ್ರಜೆಗಳೆ ಅಲ್ಲವೇನು?" ಎಂದು ಬರೆಯುತ್ತಾಳೆ. ಇದಕ್ಕೆ ಪ್ರತಿಕ್ರಿಯೆಯಾಗಿ ರಮಾಬಾಯಿಯವರು **"ಬ್ರಿಟಿಷ್ ರಾಜ್ಯವಾಗಲೀ, ಹಿಂದೂ ರಾಜ್ಯವಾಗಲೀ, ಭಾರತದಲ್ಲಿ ಮಹಿಳೆಯರಿಗೆ ಮಾತ್ರ ಯಾವ ಭರವಸೆಗಳೂ ಇಲ್ಲವಾಗಿವೆ. ನಿರಾಧಾರಳಾದ ರಖಮಾಬಾಯಿಯು ಶಕ್ತಿಶಾಲಿಯಾದ ಹಿಂಧೂಧರ್ಮದ ವಿರುದ್ಧ, ಬ್ರಿಟಿಷ್ ಆಡಳಿತದ ವಿರುದ್ಧ, 129 ಮಿಲಿಯ ಪುರುಷರ ವಿರುದ್ಧ ಹಾಗೂ 33 ಕೋಟಿ ದೇವತೆಗಳ ವಿರುದ್ಧ ಧ್ವನಿಯೆತ್ತಿದಳು, ಈ ಎಲ್ಲವೂ ಒಟ್ಟಿಗೇ ಸೇರಿ ಬಡಪಾಯಿಯಾದ ಅವಳನ್ನು ನುಚ್ಚು ನೂರುಮಾಡಿ ಅಳಿಸಿಹಾಕಿಬಿಟ್ಟವು. ಒಂಟಿ ಹೆಂಗುಸೊಬ್ಬಳನ್ನು ರಕ್ಷಿಸಲಾರದಕ್ಕೆ ಬ್ರಿಟಿಷ್ ಸರ್ಕಾರವನ್ನು ಅಲ್ಲಗಳೆಯುವಂತಿಲ್ಲ, ಏಕೆಂದರೆ ಭಾರತದ ಪುರುಷರ ಜೊತೆ ಅದು ಮಾಡಿಕೊಂಡ**



**ಒಪ್ಪಂದವನ್ನು ನಿಭಾಯಿಸಬೇಕಾಗಿದೆ. ಬ್ರಿಟಿಷರ ಲಾಭಬಡುಕತನಕ್ಕೆ ಅದರ ಆಳ್ವಿಕೆಗೆ ರಖುಮಾಳ ಜಯವು ಅಪಾಯಕಾರಿಯಾಗಿದ್ದಿತು. ನೂರು ಮಿಲಿಯ ಹೆಣ್ಣುಮಕ್ಕಳ ಸವಲತ್ತು, ತ್ಯಾಗ ಬಲಿದಾನಗಳ ಬಲದಿಂದಲೇ ಬ್ರಿಟಿಷ್ ಸರ್ಕಾರಕ್ಕೆ ಜಯವಾಗಲಿ!"** (ಅದೇ ಪು. 157.) ಎಂದು ಕಟಕಿಯಾಡುತ್ತಾ ಬ್ರಿಟಿಷ್ ಸರ್ಕಾರ ಹಾಗೂ ಸಂಪ್ರದಾಯವಾದಿಗಳಿಬ್ಬರ ಪೊಳ್ಳುತನವನ್ನೂ ಬಯಲು ಮಾಡುವುದರ ಹಿಂದೆ ರಮಾಬಾಯಿಯವರ ಎಣೆಯಿಲ್ಲದ ಧೈರ್ಯ ಸಾಹಸಗಳ ಪರಿಚಯವಾಗುತ್ತದೆ. ಇದು ಮಹಿಳಾ ಪ್ರಶ್ನೆಯೆನ್ನುವುದು ಹೇಗೆ ತನ್ನ ನೆಲೆಯನ್ನು ಕಳೆದುಕೊಳ್ಳುತ್ತಾ ಬಂದಿತು ಎನ್ನುವುದನ್ನೂ ಪ್ರತಿಬಿಂಬಿಸುತ್ತದೆ.

### ಶಾರದಾ ಸದನ

ಪಂಡಿತಾ ರಮಾಬಾಯಿಯ ಮಗಳಾದ ಮನೋರಮಾಬಾಯಿಯು ತನ್ನ ತಾಯಿಯ ಬಗ್ಗೆ ಬರೆಯುತ್ತಾ ಶಾರದಾ ಸದನದ ಉದ್ಘಾಟನೆಯ ದಿನಗಳನ್ನು ನೆನಪಿಸಿಕೊಳ್ಳುತ್ತಾಳೆ. "1889ರ ಮಾರ್ಚ್ ತಿಂಗಳ ಒಂದು ಸುಂದರವಾದ ಮಧ್ಯಾಹ್ನ ಮುಂಬಯಿಯ ವಿಲ್ಸನ್ ಕಾಲೇಜಿನ ಹಿಂದಿದ್ದ ರಸ್ತೆಯು ಜನರಿಂದ, ಗಾಡಿಗಳಿಂದ ತುಂಬಿಹೋಗಿತ್ತು. ಎಲ್ಲವೂ ಶಾರದಾ ಸದನದ ನಾಮಫಲಕದ ಕಡೆಗೆ ಮುಖಮಾಡಿ ಹೊರಬಿದ್ದಿದ್ದವು". (ಜಾರ್ಜ್ ರಾಬರ್ಟ್ ಸನ್ ಅಂಡ್ ಕೋ. ಪು. 108. 1903) ಅವಳು ಮುಂದುವರಿಯುತ್ತಾ ಪಂಡಿತಾ ರಮಾಬಾಯಿಯವರು ತಮ್ಮ ಅಮೆರಿಕೆಯ ಸ್ನೇಹಿತರ ಸಹಾಯದಿಂದ ವಿಧವೆಯರಿಗಾಗಿ ತೆರೆಯಲಿದ್ದ ಶಾರದಾ ಸದನವೆಂಬ ಸಂಸ್ಥೆಯಕುರಿತಾಗಿ ತನ್ನ ಅಭಿಪ್ರಾಯವನ್ನು Sequel ಎನ್ನುವ ಅಧ್ಯಾಯದಲ್ಲಿ ಹೇಳಿಕೊಳ್ಳುತ್ತಾಳೆ. ಆ ಸಮಾರಂಭಕ್ಕೆ ಮರಾಠಿಯ ಮೊತ್ತಮೊದಲ ಕಾದಂಬರಿಕಾರ್ತಿಯಾದ ಕಾಶಿಬಾಯಿ ಕರ್ಣೇತ್ಕರ್ ಅವರು ಅಧ್ಯಕ್ಷ ಪದವಿಯನ್ನು ವಹಿಸಲಿದ್ದರು. ಇದು ಅಂದಿನ ಪತ್ರಿಕೆಗಳ ಬಿಸಿ ಸುದ್ದಿಯಾಯಿತು. **"ಇಂತಹ ಒಂದು ಪ್ರಮುಖವಾದ ಸಂದರ್ಭದಲ್ಲಿ ಭಾರತೀಯ ಮಹಿಳೆಯೊಬ್ಬಳು ಅಧ್ಯಕ್ಷ ಪದವಿಯನ್ನು ವಹಿಸಿದುದು ಇದೇ ಪ್ರಥಮ ಅಲ್ಲದೇ ಅತ್ಯಂತ ಸೂಕ್ತವೂ ಆಗಿದೆ".** (ಅದೇ. ಪು. 109) ಎಂದು ಅನೇಕ ಪತ್ರಿಕೆಗಳು ಅಭಿಪ್ರಾಯ ಪಟ್ಟಿದ್ದವು. ಆ ಸಂದರ್ಭದಲ್ಲಿ ಪಂಡಿತಾ ರಮಾಬಾಯಿಯು ಮಾಡಿದ ಭಾಷಣದ ಸಾರ ಹೀಗಿದೆ– **"ಪತ್ರಿಕೆಗಳಾಗಲೀ, ಸಾರ್ವಜನಿಕರಾಗಲೀ ನಮ್ಮ ಮಹಿಳೆಯರ ಬಗೆಗೆ ಏನಾದರೂ ಹೇಳಿಕೊಳ್ಳಲಿ, ನಮ್ಮ ಮಹಿಳೆಯರ ಸ್ಥಿತಿಯು ಮಾತ್ರ ಚಿಂತಾಜನಕವಾದುದು. ನಮಗೆ ಮಾತ್ರ ನಮ್ಮ ಜನರ ಯೋಗಕ್ಷೇಮದ ಕುರಿತಾಗಿ ಸರಿಯಾದ ಮಾಹಿತಿಗಳಿವೆಯೇ ಹೊರತು ಪರದೇಶೀಯರಿಗಲ್ಲ. ಭಾರತೀಯ ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ನಮ್ಮ ಪ್ರತಿನಿಧಿಗಳು ಇಲ್ಲದೇ ಇರುವುದರಿಂದಲೇ ನಮ್ಮ ಈ ದುರವಸ್ಥೆಯ ಬಗ್ಗೆ ಅವರಿಗೆ ಅರಿವಿಲ್ಲದಾಗಿದೆ. ಆದುದರಿಂದಲೇ ನಮ್ಮ ಈ ದುರದೃಷ್ಟಸ್ಥಿತಿಯನ್ನು ಅಲಕ್ಷಿಸಲಾಗಿದೆ. ನಮ್ಮ ಭಾರತೀಯ ಮಹಿಳೆಯರ ಸ್ಥಿತಿಯುಮಾತ್ರ ಎಂದಿನಂತೆಯೇ ಇದೆ. ನಮ್ಮ ಈ ಅಳಲನ್ನು ಹೇಳಿಕೊಳ್ಳಲು ನಮ್ಮ ಸಹೋದರಿಯರಲ್ಲಿ ಯಾರೊಬ್ಬರ ಪ್ರವೇಶವೂ ಪಾರ್ಲಿಮೆಂಟಿನಲ್ಲಿ ಸಾಧ್ಯವಿಲ್ಲವಾಗಿದೆ. ಸಭ್ಯ ಪುರುಷರೇ, ಹಿಂದೂ ಹೆಣ್ಣುಗಳು ಅನುಭವಿಸುತ್ತಿರುವ ಕಷ್ಟಗಳ ಬಗೆಗೆ, ಹಿಂದೂ ಧರ್ಮದ ದುರದೃಷ್ಟದ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟಿಗೆ ಇರುವಷ್ಟು ಅರಿವು ನಿಮಗಾರಿಗೂ ಇಲ್ಲವಾಗಿದೆ"** ಎಂದು ವಿಷಾದ ವ್ಯಕ್ತಪಡಿಸುತ್ತಾರೆ. ಈ ನೆಲೆಯಲ್ಲಿ ಭಾರತೀಯ ಸಹೋದರರ ಸಹಾಯವನ್ನು ಅಪೇಕ್ಷಿಸುತ್ತಾರೆ. 1890ರಲ್ಲಿ ರಮಾಬಾಯಿಯು ತಮ್ಮ ಶಾರದಾಸದನವನ್ನು ಕೆಲವು ಸ್ನೇಹಿತರ ಅಭಿಪ್ರಾಯದ ಮೇರೆಗೆ ಮಡಿವಂತ ವಿಧವೆಯರ ಕೇಂದ್ರವಾಗಿದ್ದ ಪುಣೆಗೆ ವರ್ಗಾಯಿಸಿಕೊಂಡರು. ಈ ಸಂಸ್ಥೆಗೆ ಪ್ರೋತ್ಸಾಹಗಳು ಸಿಕ್ಕಹಾಗೆ ಆಕ್ಷೇಪಗಳೂ ಹೇರಳವಾಗಿದ್ದವು. "ವಿಧವೆಯರಿಗೊಂದು ಶಾಲೆಯೇ?, ಗಂಡನಾಗಲೀ ಮಕ್ಕಳಾಗಲೀ ಇಲ್ಲದ ಅವರು ಬೀದಿನಾಯಿಗಳಿಗಿಂತಲೂ, ಕಾಗೆಗಳಿಗಿಂತಲೂ ಹೀನಾಯವಾಗಿರುವಾಗ? .....ಒಂದು ತುಣುಕು ರೊಟ್ಟಿಯನ್ನಾಗಲೀ, ಹಿಡಿಯನ್ನವಾಗಲೀ ಅವರು ಹೇಗೂ ಸಂಪಾದಿಸಿಕೊಳ್ಳಬಹುದು. ಅಂತಹ ವಿಧವೆಯರಿಗೆ ಶಿಕ್ಷಣದ ಅಗತ್ಯವಿಲ್ಲವೆಂದು. ಶಾರದಾ ಸದನವನ್ನು ನೋಡಿದ ಪೂರ್ವ ಪ್ರಾಂತ್ಯದ ರಾಜಕುಮಾರನೊಬ್ಬ ಉದ್ಗಾರ ತೆಗೆದದ್ದನ್ನು ಮನೋರಮಾಬಾಯಿಯು ಗುರುತಿಸುತ್ತಾಳೆ. (ಅದೇ. ಪು. 116) ವಿಧವೆಯರ ಶಿಕ್ಷಣವನ್ನು ಹಾಗೂ ಇತರಮಹಿಳೆಯರ ಏಳಿಗೆಗಾಗಿ ಅನೇಕ ಯೋಜನೆಗಳನ್ನು ಸದನವು ಹಾಕಿಕೊಂಡಿತ್ತೆಂದು ಮನೋರಮಾ ತಿಳಿಸುತ್ತಾಳೆ. ಆಗಸ್ಟ್ 1900ರ ವೇಳೆಗೆ ವಿವಿಧ ವಯೋಮಾನದ ಸಾವಿರದಮುನ್ನೂರೈವತ್ತು ಅಶಿಕ್ಷಿತ ಹುಡುಗಿಯರನ್ನು ಸದನವು ಹೊಂದಿತ್ತೆಂದು ಅವರು ತಿಳಿಸುತ್ತಾರೆ. ಕೆಲವು ಸುಧಾರಕರ ಹಾಗೂ ಅಮೆರಿಕೆಯ ಸ್ನೇಹಿತರ ನೆರವಿನಿಂದ ಸದನವನ್ನು ಅನೇಕ ವೈರುಧ್ಯಗಳ ನಡುವೆಯೂ ನಡೆಸಿಕೊಂಡು ಹೋಗುತ್ತಿದ್ದ ಸಂದರ್ಭದಲ್ಲಿ ತನ್ನ ಸದನದ ಹೆಣ್ಣುಮಕ್ಕಳನ್ನು ಮತಾಂತರಗೊಳಿಸುತ್ತಿದ್ದಾರೆಂಬ ಆರೋಪಕ್ಕೆ ರಮಾಬಾಯಿಯವರು ಗುರಿಯಾಗಬೇಕಾಯಿತು. ಕೇಸರಿ ಮುಂತಾದ ಮರಾಠಿ ಪತ್ರಿಕೆಗಳಿಗಂತೂ ಇಂತಹ ಆಧಾರವಿಲ್ಲದ ಸುದ್ದಿಗಳು ಪುಷ್ಕಳವಾದ ಭೋಜನವನ್ನು ಒದಗಿಸಿದವು. ಆಗ ದುಃಖಿತರಾದ ರಮಾಬಾಯಿಯವರು "ನನ್ನ ಹಿಂದೂ ಬಾಂಧವರು ನನ್ನ ಶಾಲೆಯನ್ನು ನೆಲಸಮಮಾಡಿ ಅದರ ಭಗ್ನಾವಶೇಷಗಳ ಮೇಲೆ ಮತ್ತೊಂದು ಶಾಲೆಯನ್ನು ಕಟ್ಟುವ ಯೋಜನೆಯಲ್ಲಿದ್ದಾರೆ. ಆದರೆ ನನ್ನ ಶಾಲೆಯು ಮರಳಮೇಲಲ್ಲದೆ, ಗಟ್ಟಿಯಾದ ಶಾಶ್ವತವಾದ ಕಲ್ಲುಬಂಡೆಯಮೇಲೆ ಕಟ್ಟಲ್ಪಟ್ಟಿದೆ. ಅದು ಇಂದಿನವರೆಗೆ ನಿಂತಿದೆ ಮತ್ತೆ ಮುಂದೆಯೂ ನಿಲ್ಲುತ್ತದೆ". (ಅದೇ) ಅದು ಅನೇಕ ವರುಷಗಳ ಕಾಲ ವಿಪರೀತ ಸಂದರ್ಭಗಳ ನಡುವೆಯೂ ನಿಂತುದೆಂದು ಹೇಳುತ್ತಾ "ಅಲೆಗಳು ಮೇಲೆದ್ದಾಗ ಬಂದು ಬಡಿದವೇ ಹೊರತು ಅದನ್ನು ಅಲುಗಾಡಿಸಲಾಗಲಿಲ್ಲ". ಎಂದು ತನ್ನ ತಾಯಿಯವರ ಸಾಧನೆಯ ಬಗ್ಗೆ ಬಹಳ ಹೆಮ್ಮೆಯಿಂದಲೇ ಮನೋರಮಾ ಹೇಳಿಕೊಳ್ಳುತ್ತಾಳೆ.

### ಮುಕ್ತಿಶಾಲೆ

ರಮಾಬಾಯಿಯವರು ಮದ್ರಾಸ್ ಪ್ರಾಂತ್ಯದಲ್ಲಿದ್ದಾಗ 1876ರಲ್ಲಿ ಭಾರತದಲ್ಲೆದ್ದ ಭಯಂಕರ ಬರಗಾಲವನ್ನು ಕಂಡಿದ್ದರು. ಅಂತಹುದೇ ಬರಗಾಲವು 1896ರ ಸೆಪ್ಟೆಂಬರ್ ತಿಂಗಳಿನಲ್ಲಿ ಮತ್ತೆ ಸಂಭವಿಸಿದಾಗ ತಮ್ಮ ಶಾರದಾಸದನದ ಆರ್ಥಿಕ ಬಿಕ್ಕಟ್ಟುಗಳನ್ನೂ ಲೆಕ್ಕಿಸದೆ ಮಧ್ಯ ಪ್ರಾಂತ್ಯದಲ್ಲೆದ್ದ ಬರಗಾಲ ಪೀಡಿತ ಪ್ರದೇಶಕ್ಕೆ ಧಾವಿಸಿದರು. ಅಲ್ಲಿ ಕಂಡ ದಾರುಣವಾದ ದೃಶ್ಯವು ಅವರ ಮನಕರಗಿಸಿತು. ಬಡ ಕುಟೀರಗಳು (ಪೂರ್ ಹೋಮ್ಸ್) ಹಾಗೂ ನಿರಾಶ್ರಿತ ಶಿಬಿರಗಳನ್ನು ಶೋಧಿಸುತ್ತಾ ನಡೆದ ಅವರು ಕಂಡಿದ್ದು–ಮಾನವೀಯ ಭಾವನೆಗಳನ್ನು ಕಳೆದುಕೊಂಡ ತಾಯಿ ತಂದೆಯರು ತಮ್ಮ ಸ್ವಂತದ ಹೆಣ್ಣುಮಕ್ಕಳನ್ನೇ ರೂಪಾಯಿ, ಎಂಟಾಣೆಗಳಿಗೆಲ್ಲಾ ಮಾರುತ್ತಿದ್ದ, ತಮ್ಮ ಮಕ್ಕಳ ಕೈಯಿಂದಲೇ ರೊಟ್ಟಿಗಳನ್ನು ಕಸಿದು ತಿನ್ನುತ್ತಿದ್ದ, ಮೂಳೆಚಕ್ಕಳದ ಮಕ್ಕಳು ಒಣ ಹಿಟ್ಟುಗಳನ್ನೇ ಮುಕ್ಕುತ್ತಿದ್ದ ಹೃದಯವಿದ್ರಾವಕ ನೋಟಗಳನ್ನು. ಬಾಲವಿಧವೆಯರ ಸ್ಥಿತಿಯಂತೂ ಇನ್ನೂ ಚಿಂತಾಜನಕವಾಗಿತ್ತೆಂದು ಅವರು ಹೇಳುತ್ತಾರೆ, ಕಾರಣ ಪೂರ್ ಹೋಮ್ಸ್‌ಗಳಾಗಲೀ, ನಿರಾಶ್ರಿತ ಶಿಬಿರಗಳಾಗಲೀ, ಮುಖ್ಯ ರಸ್ತೆಗಳಾಗಲೀ ಅವರನ್ನು ಕೊಂಡೊಯ್ಯುತ್ತಿದ್ದುದು ವಿನಾಶದ ಅಂಚಿಗೇ ಆಗಿತ್ತೆಂದು ಅವರು

ಅರಿತಿದ್ದರು. ಅಂತಹ ಶಿಬಿರಗಳಲ್ಲಿ ಅವರನ್ನು ಬಿಡುವುದೇ ಅಪಾಯಕಾರಿಯಾಗಿದ್ದಿತು. ರಮಾಬಾಯಿಯವರು ಕಂಡ ಹಾಗೆಯೇ ಅವರು **"ಪುರುಷರ ಸ್ವಾರ್ಥಕ್ಕೆ ಸಿಕ್ಕಿ ತಮ್ಮ ಬದುಕನ್ನು ನಾಶಗೊಳಿಸಿಕೊಂಡಿದ್ದರು. ಇನ್ನು ಕೆಲವರು ದಾರುಣವಾದ ಸಾವನ್ನು ಕಾಣಲಿಕ್ಕೆಂದೇ ಆಸ್ಪತ್ರೆಗಳಲ್ಲಿ ದಾಖಲಾದರು. ಕೆಲವರಂತೂ ಅಪಮಾನದ ದಳ್ಳುರಿಯಲ್ಲಿ ಬೆಂದುಹೋದರು... ತಾಯಿಯ ಮಮತೆ ಹಾಗೂ ಸಹೋದರಿಯ ಪ್ರೇಮದಿಂದ ಕೂಡಿದ ಯಾರಾದರೂ ಅಂತಹ ಹುಡುಗಿಯರನ್ನು ರಕ್ಷಿಸಬಹುದಿತ್ತು"** (ಅದೇ. ಪು. 159). ಆದ್ದರಿಂದಲೇ ಅಳಿದುಳಿದ ಹೆಣ್ಣುಮಕ್ಕಳನ್ನಾದರೂ ಪಾರಾಗಿಸಲೆಂದು ಹೊರಟುದಾಗಿ ಅವರು ಹೇಳಿಕೊಳ್ಳುತ್ತಾರೆ. ಕ್ರಿಶ್ಚಿಯನ್ ಪಾದ್ರಿಯೊಬ್ಬರು ಅಂತಹ ಅರವತ್ತುಜನ ವಿಧವೆಯರನ್ನು ಇವರ ಪಾಲಿಗೆ ಒಪ್ಪಿಸಿದಾಗ, ಒರಟು ಪ್ರಾಣಿಗಳಂತಿದ್ದ ಅವರನ್ನು ನಾಗರೀಕರನ್ನಾಗಿಸುವುದು ಬಹಳ ಕಠಿಣವಾದ ಕೆಲಸವಾಗಿತ್ತೆಂದು ಅವರು ಹೇಳುತ್ತಾರೆ. ಬರಪೀಡಿತ ಸಂದರ್ಭದಲ್ಲಿ ಅನೇಕ ಕೊಳಕು ರೂಢಿಗಳಿಗೆ ದಾಸರಾಗಿದ್ದ ಅವರಿಗೆ ಮೂಲಭೂತ ಪೂರೈಕೆಯನ್ನೂ ಒದಗಿಸುವುದು ಬಹಳ ದುಬಾರಿಯಾಗಿತ್ತೆಂದು ಅವರು ಅಭಿಪ್ರಾಯಪಡುತ್ತಾರೆ. ಹೀಗೆ ಬರ ಪೀಡಿತ ಪ್ರದೇಶದಿಂದ ರಕ್ಷಿಸಿದ ಸುಮಾರು ಮುನ್ನೂರು ಹುಡುಗಿಯರನ್ನು ಸೇರಿಕೊಂಡಂತೆ ಮುಕ್ತಿಶಾಲೆ ಎಂಬ ಒಂದು ಮಿಷನ್ ಶಾಲೆಯನ್ನು 1897ರಲ್ಲಿ ಪ್ರಾರಂಭಿಸಿದರು. ಇಲ್ಲಿನ ಹುಡುಗಿಯರಿಗೆ ಜಾತ್ಯತೀತವಾದ ಶಿಕ್ಷಣದ ಜೊತೆಗೆ ಕ್ರಿಶ್ಚಿಯನ್ ಬೋಧನೆಯನ್ನೂ ಹೇಳಿಕೊಡಲಾಯಿತು. ರಮಾಬಾಯಿಯವರ ಪ್ರಯತ್ನದಿಂದಾಗಿ ಕೆಲವೇ ವರುಷಗಳಲ್ಲಿ ಅನೇಕ ಹುಡುಗಿಯರು ಸ್ವಾವಲಂಬಿಗಳಾದರು. ಈ ಎಲ್ಲ ಹೆಣ್ಣುಮಕ್ಕಳ ಭವಿಷ್ಯದ ಬಗ್ಗೆ ರಮಾಬಾಯಿಯವರಿಗೆ ಭಯವಾಗಿತ್ತೆಂದು ಹೇಳಿಕೊಂಡಿದ್ದಾರೆ. ಆದರೆ ಇಂತಹ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದೂ ಅಂತಹ ದುಸ್ಸಾಧ್ಯವೇನಾಗಿರಲಿಲ್ಲವೆಂದು ಅವರೇ ಸಮಾಧಾನ ಹೇಳಿಕೊಳ್ಳುತ್ತಾರೆ. ಕಾರಣ ಹಲವಾರು ಮಿಶನರಿ ಶಾಲೆಗಳಿಗೆ ಶಿಕ್ಷಕಿಯರ ಬೇಡಿಕೆಯಿದ್ದಂತೆ, ವಿದ್ಯಾವಂತ ಯುವಕರಿಗೆ ವಿದ್ಯಾವತಿಯರಾದ ಪತ್ನಿಯರ ಅಗತ್ಯವೂ ಇದ್ದುದರಿಂದ ರಮಾಬಾಯಿಯವರ ಭಯವು ಹೆಚ್ಚು ಭಯಾನಕವಾಗಿರಲಿಲ್ಲ. ಈ ಶಾಲೆಯ ಸದಸ್ಯೆಯರನ್ನು ಸಮಾಜಸೇವೆಗೋ, ಇಲ್ಲ ಇನ್ನಾವುದೇ ಕ್ರಿಯಾತ್ಮಕ ಕೆಲಸಗಳಿಗೋ ತರಬೇತುಗೊಳಿಸುವುದು ಈ ಶಾಲೆಯ ಮುಖ್ಯ ಉದ್ದೇಶವಾಗಿದ್ದಿತು. ಈ ಹುಡುಗಿಯರು ದಾದಿಯರಾಗಿ, ಉಣ್ಣೆ ಉತ್ಪಾದನೆಯಲ್ಲಿ ಕುಶಲೆಯರಾಗಿ, ಧೋಬಿಯ ಕಸುಬಿನಲ್ಲಿ ಹಾಗೂ ಕೃಷಿ ಮತ್ತು ಹಾಲು ಉತ್ಪಾದನೆ ಮುಂತಾದ ಕೆಲಸಗಳಲ್ಲಿ ಪರಿಣತರಾಗಿ ಸ್ವಾವಲಂಬಿಗಳಾದದ್ದನ್ನು ಈ ಮುಕ್ತಿಶಾಲೆಯು ದಾಖಲಿಸುತ್ತದೆ. ಇವುಗಳನ್ನೆಲ್ಲಾ ಗಮನಿಸುವಾಗ ರಮಾಬಾಯಿಯವರು ಹಮ್ಮಿಕೊಂಡ ಬೃಹತ್ ಕಾರ್ಯ ಚಟುವಟಿಕೆಗಳ ಬಗ್ಗೆ ಅದರ ಹಿಂದಿನ ಅವರ ದೈತ್ಯಶಕ್ತಿಯ ಬಗ್ಗೆ, ಅವರ ಸೋಲರಿಯದ ಸಾಹಸೀ ವ್ಯಕ್ತಿತ್ವದ ಬಗ್ಗೆ ವಿಸ್ಮಯವಾಗುತ್ತದೆ.

### ಕೃಪಾಸದನ

ಭಾರತೀಯ ಜಾತಿವ್ಯವಸ್ಥೆ, ಹಿಂದೂಶಾಸ್ತ್ರಗಳು ಮತ್ತು ಪದ್ಧತಿಗಳು, ಕೆಟ್ಟಪುರುಷರಿಂದ ಮೋಸಹೋದ ಮಹಿಳೆಯರನ್ನು ಜಾರಿಣಿಯರೆಂದು ಇತರ ಮರ್ಯಾದಸ್ಥ ಸ್ತ್ರೀಯರಿಂದ ಹೊರತುಪಡಿಸಿ ಇಟ್ಟಿರುವುದು ಇವೆಲ್ಲ ಇಡೀ ಸ್ತ್ರೀಕುಲಕ್ಕೆ ಅನ್ಯಾಯವೆಸಗಿದಂತೆ ಎಂದು ರಮಾಬಾಯಿಯವರು ಅಭಿಪ್ರಾಯ ಪಡುತ್ತಾರೆ. ಒಂದು ಕಡೆ ವಿಧವೆಯರನ್ನು ಮದುವೆಯಾಗಲು ಮುಂದೆ ಬರುವ ಯುವಕರನ್ನು ಸಾಮಾಜಿಕ ಹಾಗೂ ಧಾರ್ಮಿಕ ನಿಯಮಗಳು ಖಂಡಿಸುತ್ತಿದ್ದರೆ, ಇನ್ನೊಂದುಕಡೆ ಅದೇ ನಿಯಮಗಳು ಪುರುಷರು ಇತರ ಜಾತಿಯ ಸ್ತ್ರೀಯರೊಂದಿಗೆ ಅನೈತಿಕ ಸಂಬಂಧವನ್ನು ಹೊಂದಲು ಮತ್ತು ಅಂತಹ ಪುರುಷರ ಸೇವೆಯೇ ಮಹಾಭಾಗ್ಯವೆಂಬ ನಂಬಿಕೆಯನ್ನು ಆ ಮಹಿಳೆಯರ ಮೇಲೆ ಹೇರುತ್ತದೆ. ಒಬ್ಬ ಪುರುಷನು ಏಕಕಾಲಕ್ಕೆ ಅನೇಕ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳುವ ಪರವಾನಗಿ ಇದೆಯಾದರೂ ವಿವಾಹ ವಿಚ್ಛೇದನವಾಗಲೀ, ವಿಧವಾ ವಿವಾಹವಾಗಲೀ ಅವರಿಗೆ ಅಧರ್ಮವಾಗುತ್ತದೆ. ಅದೇ ಒಬ್ಬ ಹೆಂಗಸು ತನ್ನ ಪತಿಯು ಬದುಕಿರುವವರೆಗೆ ಹೋಗಲಿ ಸತ್ತನಂತರವೂ ಇನ್ನೊಬ್ಬನೊಡನೆ ವಿವಾಹವಾಗುವುದು ಅಸಾಧ್ಯವಾಗಿದೆ. ಬಾಲ್ಯವಿವಾಹ, ಬಹುಪತ್ನಿತ್ವ ಹಾಗೂ ವೈಧವ್ಯದ ಮೇಲೆ ಹೇರಿದ ಒತ್ತಾಯಗಳು ಪುಟ್ಟಹುಡುಗಿಯರನ್ನು ಆತ್ಮಹತ್ಯೆಗೆ ಇಲ್ಲವೇ ಸಾಮಾಜಿಕ ಘನತೆಯನ್ನು ಕಳೆದುಕೊಂಡು ನಿರ್ಲಜ್ಜಬದುಕನ್ನು ಬದುಕುವ ಅನಿವಾರ್ಯಕ್ಕೆ ದೂಡಿದ ಪಿತೃಪ್ರಧಾನ ವ್ಯವಸ್ಥೆಯ ಒಳಸಂಚನ್ನು ರಮಾಬಾಯಿಯವರು ಬಯಲಾಗಿಸುತ್ತಿದ್ದರು. "ಒಬ್ಬ ಹಿಂದೂ ಮಹಿಳೆಯಾಗಿ ನಾನೂ ಸಹ ನನ್ನ ದೇಶದ ಜಾರಿದ ಮಹಿಳೆಯರೆಂದು ಕರೆಯುವ ಈ ಮಹಿಳೆಯರ ಬಗ್ಗೆ ಅಜ್ಞಾನಿಯಾಗಿಯೇ ಇದ್ದೆ"



# 1882ರಲ್ಲಿ ಇಂಗ್ಲಿಷ್ ಎಜುಕೇಷನ್ ಕಮಿಷನ್ ಅಧ್ಯಕ್ಷ ಹಂಟರ್ ಎದುರು ರಮಾಬಾಯಿಯವರಿಂದ ಮಹಿಳಾ ಶಿಕ್ಷಣಕ್ಕಾಗಿ ಹಕ್ಕೊತ್ತಾಯ



Question 1- State what opportunities you have had of forming an opinion on the subject of Education in India, and in what province your experience have been gained?

"I am the child of a man who had to suffer a great deal on account of advocating female education, and who was compelled to discuss the subject, as well as to carry out his own views amidst great opposition.

I consider it is my duty, to the very end of my life, to maintain this cause, and to advocate the proper position of women in this land"

Question 2- What is the best method of providing teachers for girls?

Answer 2- lilt appears to me evident as a woman who are to become teachers of others should have a special training for that work. Besides having knowledge of their own language, they have to acquire English. Whether those training to be female teachers are married or unmarried, or widows they ought to be correct in their conduct and morals, and they ought also to be of respectable families. They ought to be provided with good scholarships. Teachers of girls also ought to have higher salaries than those of boys, as they should be of superior character and position. The students should live in the college compound, so as to have their manners and habits improved, and there ought to be a large building with every appliance for the comfort of the teachers & students. They ought to have a native lady of good position over them. Mere learning is not enough: The conduct and morals of the students should be attended to"

Question 3- What do you regard as the chief defects other than any to which you have already referred, that experience brought to light in the educational system as it has been hither to administered. What suggestions you make remedy of such defects?

Answer-3 -" There ought to be female inspectresses over female schools. These ought to be of the age of thirty or upwards and of a very superior class and highly educated. Whether native or European, Male inspectors are unsuitable for the following reasons

1. The women of this country are very timid, if a male inspector goes to a female school, all the women and girls are thrown in to confusion, and are unable to speak. The inspectors seeing the state of things will write a bad report of the school and teachers, and so in all probability Government will appoint a male teacher for that school, and so the school will not have the advantage of a female teacher as the education of girls is different from that of boys, female schools ought to be in the hands of female teachers.

2. The second reason is this: in 99 cases out of 100, the educated men of this country are opposed to the female education and proper position of women. If they observe the slightest fault, they magnify the grain of mustard seed into a mountain, and try to ruin the character of woman; often the poor woman, not being very courageous and well informed, her character is completely broken. Men being able to reach the authorities are believed, while women go to wall. Both should be alike to a parental Government, whose children, male and female, should be treated with equal justice. It is evident that women, being one half of the people of this country are oppressed and cruelly treated by the other half. To put a stop to this anomaly is worthy of a good government.

3. Another suggestion I would make is with regard to lady Doctor. Though in Hindustan there are numbers of gentlemen doctors, there are no ladies of that profession. The women of this country are much more reserved than in other countries, and most of them would rather die than speak of their ailments to a man. The want of Lady Doctors is, therefore, the cause of hundreds of thousands of women dying premature deaths. I would, therefore, earnestly entreat our government to make provision of medicine by women, and save the lives of multitudes. The want of lady doctors is very much felt and is great defect in the education of the women of this country."

(ಅದೇ ಪು. 279-292) ಎನ್ನುತ್ತಾ ತಮ್ಮ ಮೊದಲ ಅಜ್ಞಾನಕ್ಕಾಗಿ ಪಶ್ಚಾತ್ತಾಪ ಪಡುತ್ತಾರೆ. ಇಂತಹ ವಿಚಾರಗಳನ್ನು ಮೈ ಮನಗಳ ತುಂಬಾ ತುಂಬಿಕೊಂಡ ರಮಾಬಾಯಿಯವರು 1883ರಲ್ಲಿ ಲಂಡನ್ನಿಗೆ ಭೇಟಿಯಿತ್ತಾಗ ವಾಂಟೇಜ್ ಸಹೋದರಿಯರು ಇಂತಹ ಅದೃಷ್ಟಹೀನ ಹೆಣ್ಣುಮಕ್ಕಳಿಗಾಗಿಯೇ ಇರುವ ಅನೇಕ "ರಕ್ಷಣಾ ಸದನ" (ರೆಸ್ಕ್ಯೂ ಹೋಂ)ಗಳನ್ನು ತೋರಿಸಿದಾಗ ಹಿಂದೂಗಳ ದೃಷ್ಟಿಯಲ್ಲಿ ಕ್ರೂರಿಗಳೆನಿಸಿಕೊಂಡ ಕ್ರಿಶ್ಚಿಯನ್ನರ ಉದಾರತೆಯ ಪರಿಚಯವಾಯಿತೆಂದು ಹೇಳುತ್ತಾರೆ. ಇದರಿಂದ ಪ್ರೇರಣೆಗೊಂಡ ರಮಾಬಾಯಿಯವರು ತಮ್ಮ ಹಿಂದೂ ಭಗಿನಿಯರಿಗಾಗಿ ಇಂತಹುದೊಂದು ಕಾರ್ಯವನ್ನು ಮಾಡಬೇಕೆಂಬ ಸಂಕಲ್ಪವನ್ನು ಮಾಡುತ್ತಾರೆ. "ಹಿಂದೂಶಾಸ್ತ್ರಗಳು ಇಂತಹ ಮಹಿಳೆಯನ್ನು ಸಹಾನುಭೂತಿಯಿಂದ ನೋಡಲಾರವು, ಬದಲಾಗಿ ಅವು ರಾಜನೊಬ್ಬ ಅಂತಹ ಸ್ತ್ರೀಯರನ್ನು ಊರಹೊರಗೆ ನಾಯಿಗಳಿಗೆ ಆಹಾರವಾಗಿ ಎಸೆಯಬೇಕೆಂಬ ಆದೇಶವನ್ನು ಹೊರಡಿಸಬೇಕೆಂದು ಬಯಸುತ್ತವೆ... ಇಂತಹ ಪಾಪಿಗಳು ದಯೆಗೆ ಯೋಗ್ಯರಲ್ಲವೆಂಬುದನ್ನು ಅದು ಅನುಮೋದಿಸುತ್ತವೆ". (ಅದೇ) ಹಿಂದೂಮಹಿಳೆಯರು ಇಂತಹ ದಯನೀಯವಾದ ಸಂಕಟದಲ್ಲಿ ಸಿಲುಕಿದಾಗ ಬ್ರಿಟಿಷ್ ಹಾಗೂ ಹಿಂದೂ ಮಹಿಳೆಯರ ಸ್ಥಿತಿಗತಿಗಳ ನಡುವೆ ಇರುವ ಅಗಾಧವಾದ ವ್ಯತ್ಯಾಸವನ್ನು ಇದು ಬಯಲಾಗಿಸುತ್ತದೆ. 1894ರಲ್ಲಿ ಭಾರತಕ್ಕೆ ಬಂದ ರಮಾಬಾಯಿಯವರು ಬೃಂದಾವನಕ್ಕೆ ಭೇಟಿ ನೀಡಿ ಅಲ್ಲಿ ಮಹಿಳೆಯರ ಮೇಲೆ ಪುರೋಹಿತರು ನಡೆಸುತ್ತಿದ್ದ ಅತ್ಯಾಚಾರಗಳನ್ನು ಬಯಲಿಗೆಳೆಯುತ್ತಾರೆ. ಯಾತ್ರಾರ್ಥಿಗಳಾಗಿ ಬರುತ್ತಿದ್ದ ಹಿಂದೂ ವಿಧವೆಯರನ್ನು ಮಾರಾಟಮಾಡಿ ಧನಸಂಗ್ರಹ ಮಾಡುತ್ತಿದ್ದ ಸತ್ಯವನ್ನು ಬಯಲಿಗೆಳೆಯುತ್ತಾ, "ಹಿಂದೂ ಧರ್ಮಕ್ಕೆ ಇಂಥ ದನಗಾಹಿ ಪೂಜಾರಿಗಳೇ ಉಪದೇಶಿಸಿದ ಹಾಗೆ, ಬ್ರಾಹ್ಮಣರ ದೈಹಿಕ ಬಯಕೆಗಳನ್ನು ಇಂತಹ ಪವಿತ್ರ ಸ್ಥಳಗಳಲ್ಲಿ ತಣಿಸುವ ಹೆಣ್ಣುಮಕ್ಕಳ ಕೃತ್ಯವು ಎಂದೆಂದಿಗೂ ಪಾಪದ್ದಲ್ಲ" (ಅದೇ) ಎನ್ನುವ ಪೂಜಾರಿಗಳ ಸಮಯಸಾಧಕತೆಯನ್ನು ಬಯಲಿಗೆಳೆಯುತ್ತಾರೆ. ಪೂಜಾರಿಗಳು ಹಾಗೂ ಯತ್ರಾರ್ಥಿಗಳನ್ನು ತಣಿಸುವ ಮಹಿಳೆಯರೆಲ್ಲರೂ ಪಾಪದ ಕೂಪದಲ್ಲಿಯೇ ಕೊಳೆತರೂ ಅದು ಶ್ರೇಷ್ಠವಾದ ಸೇವೆ ಯಾದುದರ ಕುರಿತಾಗಿ ವ್ಯಂಗ್ಯವನ್ನು ವ್ಯಕ್ತಪಡಿಸುತ್ತಾರೆ. ಅವರು ಪುಣೆಯಲ್ಲಿ ಶಾರದಾ ಸದನವನ್ನು ಆರಂಭಿಸಿದಾಗಲೇ ಅವರಿಗೆ ವೇಶ್ಯೆಯರ ಈ ಸಮಸ್ಯೆಗಳ ಪರಿವೆ ಇದ್ದಿತು. ಬೃಂದಾವನದ ಘಟನೆಯಿಂದಾಗಿ ರಮಾಬಾಯಿಯವರ ಕಣ್ಣು ತೆರೆಯಿತು. ಅದೇ ಹೊತ್ತಿಗೆ ಅಮೆರಿಕೆಯ ವಿಶ್ವಸನೀಯ ಮಿಶನರಿಗಳಾದ ಮಿಸ್ ಎಡ್ಮಂಡ್, ಶ್ರೀಮತಿ ಬೇಕರ್ ಮುಂತಾದವರ ಸಹಾಯದಿಂದ 1899ನೇ ಇಸವಿ ಮಾರ್ಚ್ 20ರಂದು ಪುಣೆಯ ಬಳಿಯ ಕೇಡ್ ಗಾಂವ್ ಎನ್ನುವಲ್ಲಿ ವೇಶ್ಯೆಯರ ಸುಧಾರಣೆಗೆಂದು ಸ್ಥಾಪನೆಗೊಂಡ ಸಂಸ್ಥೆಗೆ ಕೃಪಾಸದನ ಅಥವಾ ಹೋಂ ಆಫ್ ಮರ್ಸಿ ಎಂದು ನಾಮಕರಣ ಮಾಡಲಾಯಿತು. ಇಲ್ಲಿನ ಸದಸ್ಯೆಯರಿಗೆ ಅನೇಕ ಕೈಗಾರಿಕಾ ಕೆಲಸಗಳನ್ನು ಕಲಿಸಲಾಗುತ್ತಿತ್ತು. 1900ರಲ್ಲಿ ಮತ್ತೆ ಭೀಕರ ಬರಗಾಲಕ್ಕೆ ಭಾರತವು ತುತ್ತಾದಾಗ ಹಲವಾರು ಮಹಿಳೆಯರನ್ನು ಕೃಪಾ ಸದನಕ್ಕೆ ಕರೆತರಲಾಯಿತು. ಅದರಲ್ಲಿ ಅನೇಕ ಹುಡುಗಿಯರು ಗುಣವಾಗದ ಖಾಯಿಲೆಯಿಂದಾಗಿ ಮರಣಹೊಂದಿದರೆಂದು ವಿಷಾದ ವ್ಯಕ್ತಪಡಿಸುತ್ತಾರೆ. ಆದರೆ ಇಂತಹ ರಮಾಬಾಯಿಯವರ ಸುಧಾರಣಾ ಕಾರ್ಯಗಳಿಂದ ರೊಚ್ಚಿಗೆದ್ದ 'ಬ್ರಾಹ್ಮಣ ಸಹೋದರರು' ತಮ್ಮ ಸದನವನ್ನು ಒಡೆಯಲೆಂದು ಉದ್ದೇಶಿಸಿ ಚಳವಳಿಗಳನ್ನೇ ಹೂಡಿದುದನ್ನು ಅವರು ಹೇಳಿಕೊಳ್ಳುತ್ತಾರೆ. ತಮ್ಮ ಪಾಶ್ಚಾತ್ಯ ಸಹೋದರಿಯರಿಗೆ "ರಂಜಕವಾದ ಪ್ರವಚನಗಳಿಂದ ಮಾರುಹೋಗಬೇಡಿ" ಎಂದು ಬೇಡಿಕೊಳ್ಳುತ್ತಾರೆ (ಅದೇ). ರಮಾಬಾಯಿಯವರಂತಹ ಮಹಿಳೆಯರಲ್ಲಿ ಎಚ್ಚೆತ್ತ ಆತ್ಮಶಕ್ತಿಯ ಎದುರು ಬ್ರಾಹ್ಮಣ್ಯದ ಹುಸಿತನಗಳು ಮತ್ತೂ ಪೊಳ್ಳಾಗಿ ಕಾಣಿಸತೊಡಗಿದವು. ಇಂತಹ ಪೊಳ್ಳುತನವನ್ನು ತೋರಿಸಿಕೊಡುವ ಧೈರ್ಯ ರಮಾಬಾಯಿಯವರಿಗೆ ಪ್ರಾಪ್ತವಾದುದರಿಂದಲೇ ಅವರಿಗೆ ನ್ಯಾಯವಾಗಿ ಸಲ್ಲಬೇಕಾದ ಗೌರವವಿರಲಿ, ಅನೇಕ ಸುಳ್ಳು ಆರೋಪಗಳಿಗೆ ಅವರನ್ನು ಭಾಧ್ಯಸ್ತರನ್ನಾಗಿಸುತ್ತಾ ಮಹಿಳಾ ಇತಿಹಾಸದಿಂದಲೇ ಅವರನ್ನು ತೆಗೆದುಹಾಕುವ ಪ್ರಯತ್ನದಲ್ಲಿ ಪಿತೃಪ್ರಧಾನವ್ಯವಸ್ಥೆಯು ತೊಡಗಿಕೊಂಡಿತು. ರಮಾಬಾಯಿಯವರು ಈ ಎಲ್ಲಾ ಪಿತೂರಿಗಳಿಂದ ಭ್ರಮನಿರಸನಗೊಂಡು **"I realised, after reading the fourth chapter of St John's Gospel, that Christ was truly the Divine Survivor. He claimed to be, and no one but he could transform an uplift of the downtrodden womanhood of India and every land"** ಎಂದು ತಮ್ಮ ಜೀವನ ಚರಿತ್ರೆಯ **'A Testimony of Our Inexhaustible Treasure'** (ಅದೇ ಪು. **308-324**)ನಲ್ಲಿ ಅವರು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಗೊಳ್ಳಲು ಇದ್ದ ಕಾರಣವನ್ನು ಬಹಳ ವಿನಯದಿಂದ ಹೇಳಿಕೊಳ್ಳುತ್ತಾರೆ, ಮತಾಂತರವೆಂಬುದು ಅವರಿಗೆ ವೈಯಕ್ತಿಕ ವಿಷಯವಾಗಿದ್ದಿತು. ಕೊನೆಕೊನೆಗೆ ಅವರ ಅನುಭಾವಿಕ ಹುಡುಕಾಟಗಳ ಸಾಧನವೂ ಆಯಿತೆಂಬುದು ಅವರ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ. ಆದುದರಿಂದಲೇ ಅವರಿಗೆ ಹಿಂದೂಧರ್ಮದ ಬಗೆಗಾಗಲೀ, ಕ್ರಿಶ್ಚಿಯನ್ ಧರ್ಮದ ಬಗೆಗೆಗಾಗಲೀ ಇತರ ಆಂಗ್ಲ ಅಥವಾ ಕನ್ನಡ ಲೇಖಕಿಯರಂತೆ ತಾತ್ವಿಕ ಹಿನ್ನೆಲೆಯಿಂದ ತಪ್ಪಿಸಿಕೊಂಡ ಕುರುಡುಮೋಹವಿಲ್ಲದಿದ್ದುದನ್ನು ಕಾಣುತ್ತೇವೆ. ಹೀಗೆ ರಮಾಬಾಯಿಯವರು (ಹಿಂದುವಾಗಿ) ಒಳಗಿನವರಾಗಿ ಹೊರಗಿನದನ್ನು, ಹೊರಗಿನವರಾಗಿ (ಕ್ರಿಶ್ಚಿಯನ್ನಾಗಿ) ಒಳಗನ್ನು ಕಂಡುಕೊಂಡ ಕಾರಣದಿಂದಲೇ ಅವರ ವಿಚಾರಗಳಿಗೊಂದು ವಸ್ತುನಿಷ್ಠತೆಯು ಪ್ರಾಪ್ತವಾಗಿದೆ.

*Ref : Meera Kosambi (Ed). Pandita Ramab.. through her own words; oxford Univ press New Delhi-2000*

# ಆನ್ತುವಾನ್ ಖಸ್ಸಾರ್ ಅವರ ನಾಲ್ಕು ಕವಿತೆಗಳು

*ಸ್ಲೋವೇನಿಯದ ಸೆಂಟರ್ ಫಾರ್ ಸ್ಲೋವೇನಿಯನ್ ಲಿಟರೇಚರ್ ಹಾಗು ಲಿವಿಂಗ್ ಲಿಟರೇಚರ್ ಫೆಸ್ಟಿವಲ್ ಇನ್ ಲುಬ್ಯಾನದ ಆಶ್ರಯದಲ್ಲಿ ಮೇ-ಜೂನ್ 2010ರಲ್ಲಿ ಏರ್ಪಡಿಸಿದ್ದ ಅಂತರರಾಷ್ಟ್ರೀಯ ಭಾಷಾಂತರ ಕಮ್ಮಟಕ್ಕೆ ಮಾಲ್ಟೀಸ್, ಜಪನೀಸ್, ಚೈನೀಸ್, ಗಲೀಸಿಯನ್, ರಷಿಯನ್, ಸ್ಲೋವೇನಿಯನ್ ಹಾಗು ಕನ್ನಡ ಹೀಗೆ ಪ್ರಪಂಚದ 7 ಭಾಷೆಗಳಿಂದ ಏಳು ಕವಿಗಳನ್ನು ಆಹ್ವಾನಿಸಲಾಗಿತ್ತು. ಭಾರತವನ್ನು ಪ್ರತಿನಿಧಿಸಿದವರು ಮಮತಾ ಜಿ. ಸಾಗರ್. ಈ ಕಮ್ಮಟವು ಮೇ ತಿಂಗಳ 29ರಿಂದ ಜೂನ್ 6ರ ವರೆಗೆ ಸೆಜ್ಞಾನ ಎಂಬ ಊರಿನ ಡಾನೆ ಎಂಬ ಹಳ್ಳಿಯಲ್ಲಿ ನಡೆಯಿತು.*

*ಫೆಬ್ರವರಿ ತಿಂಗಳಲ್ಲೇ ಏಳು ಕವಿಗಳಿಗೂ ಉಳಿದ ಆರು ಜನರ ಕವಿತೆಗಳನ್ನು ಮೂಲ ಭಾಷೆಯಲ್ಲಿ ಹಾಗು ಅದರ ಇಂಗ್ಲಿಷ್ ಭಾಷಾಂತರವನ್ನು ಕಳಿಸಲಾಗಿತ್ತು. ಇಂಗ್ಲಿಷ್ ಭಾಷಾಂತರವನ್ನು ಆಧರಿಸಿ ತಮ್ಮ ಭಾಷೆಗೆ ಆ ಆರೂ ಭಾಷೆಯ ಕವಿಗಳ ಕವಿತೆಗಳನ್ನು ಭಾಷಾಂತರಿಸಿದ್ದರು. ಡಾನೆಯಲ್ಲಿ ನಡೆದ ಕಮ್ಮಟದ ಸಂದರ್ಭದಲ್ಲಿ ಕವಿಗಳು ಜೊತೆಯಲ್ಲಿ ಕೂತು, ತಮ್ಮ ತಮ್ಮ ಭಾಷೆಗಳಲ್ಲಿ ಕವಿತೆಗಳನ್ನು ಓದಿ, ಆಯಾ ಭಾಷೆಗಳ ಲಯ, ಅರ್ಥ, ಗುಣಗಳನ್ನು ಗಣನೆಗೆ ತೆಗೆದುಕೊಂಡು ಭಾಷಾಂತರಗಳನ್ನು ಮರು ಪರಿಶೀಲನೆ ಮಾಡಿದರು. ಈ ಸಾರಿ ಇಂಗ್ಲಿಷನ್ನು ಕೈ ಬಿಟ್ಟು ಮೂಲ ಭಾಷೆಯಲ್ಲೇ ಕವಿತೆಗಳನ್ನು ಪರಾಮರ್ಶಿಸಿ ಮರು ಭಾಷಾಂತರ ಮಾಡಿದರು. ಇಂಗ್ಲಿಷ್ ಕೇವಲ ಸಂವಹನ ಭಾಷೆಯಾಗಿ ಮಾತ್ರ ಉಳಿದಿತ್ತು.*

*ಈ ಕಮ್ಮಟದಲ್ಲಿ ಭಾಷಾಂತರಿಸಲಾದ ಮಾಲ್ಟ ದೇಶದ ಕವಿ ಆಂತುವಾನ್ ಖಸ್ಸಾರ್ ಅವರ ನಾಲ್ಕು ಕವಿತೆಗಳು ಇಲ್ಲಿವೆ. ಕಳೆದ ತಿಂಗಳು ಆಂತುವಾನ್ ಭಾರತಕ್ಕೆ ಭೇಟಿ ನೀಡಿ, ಬೆಂಗಳೂರಿನಲ್ಲಿ ಹದಿನೈದು ದಿನಗಳ ಕಾಲ ಇದ್ದು, ಹಲವೆಡೆ ತಮ್ಮ ಕವಿತೆಗಳನ್ನು ವಾಚಿಸಿದರು. ಮಮತಾ ಜಿ. ಸಾಗರ ಅವರು ಈ ಮಾಲಿಕೆಯಲ್ಲಿ ಕನ್ನಡಕ್ಕೆ ಅನುವಾದಗೊಂಡ ಕವಿತೆಗಳ ಒಂದು ಕಂತನ್ನು ಪ್ರಕಟಿಸಲು ಅನುಮತಿಸಿದ್ದಾರೆ. ಮುಂದೆಯೂ ಲಭ್ಯವಾದರೆ ಇತರರ ಕವಿತೆಗಳೂ ಪ್ರಕಟವಾಗುತ್ತವೆ.*

*ಕವಿಯ ಕಿರು ಪರಿಚಯ*

*ಮಾಲ್ಟೀಸ್ ಹಾಗೂ ಇಂಗ್ಲಿಷಿನಲ್ಲಿ ಬರೆವ ಆನ್ತುವಾನ್ ಕಸ್ಸಾರ್ ಸಮಕಾಲೀನ ಯುರೋಪಿನ ಹೆಸರಾಂತ ಕವಿ. ಮಾಲ್ಟ, ಇಂಗ್ಲೆಂಡ್, ಸ್ಪೇನ್ ದೇಶಗಳಲ್ಲಿ ಬೆಳೆದು, ಇಟಲಿ, ಫ್ರಾನ್ಸ್ ಮತ್ತು ಲುಕ್ಸೆಂಬರ್ಗ್ ದೇಶಗಳಲ್ಲಿ ಕೆಲಸ ನಿರ್ವಹಿಸಿ ಸಧ್ಯಕ್ಕೆ ಮಾಡ್ರಿಡ್‌ನಿಂದ ಮಾಲ್ಟಕ್ಕೆ ಹಿಂದಿರುಗುವ ತಯಾರಿಯಲ್ಲಿರುವ ಈ ಕವಿಯ ಕವಿತೆಗಳು ಮುಖ್ಯವಾಗಿ ಆರ್ಥಿಕ ಹಾಗೂ ರಾಜಕೀಯ ಕಾರಣಗಳಿಂದ ತಮ್ಮ ದೇಶಗಳಿಂದ ಸ್ಥಳಾಂತರಗೊಂಡ ಜನಗಳ ಬದುಕಿನ ಬಗ್ಗಿನದು. ಪ್ರಪಂಚದ ವಿವಿಧ ತಳ ಸಮುದಾಯಗಳ ಜೊತೆ ನಿರಂತರವಾಗಿ ಕೆಲಸ ಮಾಡುತ್ತ ಬಂದಿರುವ ಆನ್ತುವಾನ್‌ರ ಕವಿತೆಗಳು ವಿಶ್ವದ ಹಲವು ಭಾಷೆಗಳಿಗೆ ಭಾಷಾಂತರ ವಾಗಿವೆ.*

## 1. ಲೆಡ್

ಅವರು ಟೇಬಲ್ಲಿನಡಿಯಿಂದ ಹೊರಬರುತ್ತಾರೆ, ಬಾಚಿಕೊಂಡರು
ಒಂದಷ್ಟು ಬಟ್ಟೆ ಬರೆ, ಒಂದೆರಡು ಹೆಚ್ಚು ಕಿತ್ತಳೆ ಹಣ್ಣುಗಳು, ತಲೆ ಕಿತ್ತ
ಕರಡಿ ಗೊಂಬೆಯ ಕೈಯಲ್ಲಿ ಹಿಡಿದ ಕೂಸನ್ನ ಗಬಕ್ಕನೆ ಅವಚಿಕೊಂಡು,
ಗದ್ದೆಯ ತಮ್ಮ ಗುಡಿಸಿಲತ್ತ ಹೊರಟಿದ್ದಾರೆ. ಮುರಿದು ಬಿದ್ದ
ಮಸೀದಿಯಿಂದ ಸಿಡಿದ ಉರಿವ ಗಾಜಿನ ಚೂರುಗಳಿಂದಾದ ಗಾಯ.

ಹತ್ತಿಯ ಹಾಗೆ ಹರಡಿದ ಹೊಗೆಯಿಂದ ಹೊರಬರುತ್ತಾಳೆ ಅವಳು. ಪ್ರತಿಧ್ವನಿಸುತ್ತಿದೆ
ಗಂಡನ ಮೌನ ಅವಳ ಸೆರಗ ಮರೆಯಿಂದ,
ಧೂಳು, ಮಂಪರು ಮಂಪರಾಗಿ ಪಾಚಿಗಟ್ಟುತ್ತಿದೆ
ಉರಿಯುತ್ತದೆ ಅವಳ ಮಗನ ರಕ್ತ ತಣ್ಣನೆಯ ಶೀಟಿನ ಮೇಲೆ,
ಅಳಲೂ ತ್ರಾಣವಿಲ್ಲದೆ ಬಾಯ್ಬಿಡಲೂ ಆಗದೆ
ತುಂಬಿ ತುಳುಕುತ್ತಿರುವ ಆಸ್ಪತ್ರೆಯಂಗಳದಲ್ಲಿ.

ಎಂಥಾ ಪೋಲು, ಸಮಯ, ಬದುಕು,
ಮುಂದೂಡಿದ ಕರುಣೆ ಕಕ್ಲಾತಿಗಳು ಕೆಲಸಕ್ಕೇ ಬಾರದವು
ತೆರೆದ ಆಕಾಶದಿಂದ, ಬಿರಿದ ಕೊಲ್ಲಿಗಳಿಂದ
ಧಡ ಧಡಿಸಿ ಸೀಸದ ಬಾಂಬುಗಳ ಸರಣಿ ಲಾಟರಿ ಹತ್ತಿದಹಾಗೆ
ಸೇಡಿಗೂ ಎಡೆಗೊಡದ ಸುಳ್ಳೇ ಯುದ್ಧ
ಹೊಗೆಯೊಳಗಾಡುವ ಹೊಗೆ, ಕಳಂಕದೊಳಗಷ್ಟು ಕಳಂಕ.

* * *

## 2. ಏರ್ಪೋರ್ಟ್

ವಿಮಾನ ನಿಲ್ದಾಣ. ಕಸ್ಟಮ್ಸಿನ ಸರಹದ್ದನ್ನ
ಜಿಗಿಯುತ್ತಾನೆ ಹುಡುಗ.
ಅವನಿಗೆ ಗಡಿಗಳಿಲ್ಲ.

*ಮಾಲ್ಟೀಸ್ ನಿಂದ ಕನ್ನಡಕ್ಕೆ*
■ *ಮಮತಾ ಜಿ. ಸಾಗರ*

# 3. ಕವಿತೆ

ಕವಿತೆಯೆಂದರೇನು, ಕೇಳುತ್ತಿ ನೀನು
ಆ ನಿನ್ನ ದೊಡ್ಡ ಸುಂದರ ಕಣ್ಣುಗಳು
ನಮ್ಮಿಬ್ಬರ ನಡುವೆ ಎದ್ದ
ಕಾಫಿಯ ಹಬೆಯನ್ನು ಭೇದಿಸುತ್ತಿರುವಾಗ
ನನಗೆ ಹೇಗೆ ಗೊತ್ತಾಗಬೇಕು. ಆಹ್,
ತಿಳಿಸಿ ಹೇಳುವುದು ಕಷ್ಟ
ಕವಿತೆ ಒಂದು ನಕ್ಷೆ. ಅದೇ ಉಸಿರು
ಹಸಿವ ನೀಗಿಸುವ ಅನ್ನ.
ಅದೊಂದು ಪಾಸ್ಪೋರ್ಟು ಅಲೆಗಳಲ್ಲಿ ಎಸೆದು
ಉಪ್ಪು ನೀರಲ್ಲಿ ತೊಯ್ದು ಚಿಂದಿಯಾದ್ದು.
ಇಲ್ಲವೆ, ಕವಿತೆ, ಗಡದ್ದಾಗಿ ನಾಕೈದು ವೋಡ್ಕಾ ಇಳಿಸಿದ
ಭೀಭತ್ಸ ಹೆಂಗಸಿನ ಮುಖ.
ಆದರೆ, ಉಸಿರುಗಟ್ಟುವ ನಾಲ್ಕು ಗೋಡೆಗಳ
ಆಫೀಸಿನಿಂದ ಆಚೆ ಬಿದ್ದಾಗ,
ಒಂದು ಇಡೀ ದಿನದ ಕಾಮಾಗಳು
ಕಳೆದು ಹೋದ ವಿರಾಮಗಳಿಂದ ಹೊರಬಿದ್ದಾಗ
ಆ ಮೂರನೇ ಮರದಲ್ಲಿ ಕೋಗಿಲೆಯ
ಹಾಡೂ ನನ್ನ ಗಮನ ಸೆಳೆಯುವುದಿಲ್ಲ.
ಪ್ರಿಯೆ, ನನಗೆ ಗೊತ್ತಿಲ್ಲ,
ಅದನ್ನು ಸುಮ್ಮನೇ ಹಾಗೇ ವಿವರಿಸಲಾಗುವುದಿಲ್ಲ.
ನಿನಗೆ ಉತ್ತರಿಸ ಬೇಕೆಂದರೆ,
ನಾವು ಬಾಲ್ಕನಿಗೆ ಹೋಗಬೇಕು–
ಕ್ಷಮಿಸು. ನಿನ್ನ ಹೂಗಳು ಸತ್ತುಹೋಗಿವೆ
ನೀನು ವಿದೇಶಕ್ಕೆ ಹೋದಾಗ
ನೀರು ಹಾಕುವುದನ್ನೇ ಮರೆತಿದ್ದೆ.
ಚಿಂದಿಯಾದ ಬದುಕಿನ ಈ ತುಂಡು
ಜಾಗವನ್ನೀಗ ಇರುವೆಗಳು ಗೆದ್ದುಕೊಂಡಿವೆ
ನಿನಗೆ ಹೇಳಬೇಕು, ಆದರೂ ಅದೇನೆ ನನ್ನ ಪೆನ್ಸಿಲನ್ನ ನಡುಗಿಸುತ್ತದೆ.
ಲೇಖನಿಯನ್ನೇ ಕೋಪ ಮಾಡ್ಕೋ ಬೇಡ. ಸಾರಿ, ಬಿಝಿಯಾಗಿದ್ದೆ.
ಪ್ರಿಯೆ, ನೀನು ಬೆರಳ ಕಚ್ಚುತ್ತಿರುವಾಗ
ನಿನ್ನ ಮುಖ ಕೆಂಪಗಾಗಿ
ನನ್ನ ಚಿಕ್ಕಮ್ಮನ್ನ ನೆನಪಿಗೆ ತರುತ್ತೀ
ಅದು ಕವಿತೆ
ನಿಲ್ಲು, ಕೈ ಎತ್ತಬೇಡ,
ಅಯ್ಯೋ!
ಅದೆಷ್ಟು ಜೋರಾಗಿ, ಕೂಗದೇ ಸುಮ್ಮನಿರುವುದಾದರೂ ಹೇಗೆ!
ತಣ್ಣನೆಯ ಐಸನ್ನು ಕೆನ್ನೆಗಿಡುತ್ತೇನೆ.
ಉರಿವ ಚರ್ಮದ ಮೇಲೆ ತಣ್ಣನೆಯ ಸೋಂಕು, ಅದು ಕವಿತೆ.
ಹೋಗುತ್ತದೆ, ಇರಲಿ ಬಿಡು
ಇದೀಗ ನಾವಿಬ್ಬರೂ ಇಲ್ಲಿ
ನನ್ನ ತೋಳುಗಳು ನಿನ್ನ ಸೊಂಟದ ಸುತ್ತ
ನಿನ್ನ ತುಟಿಗಳ ಬಿಸಿ, ನಿನ್ನುಸಿರು ನನ್ನ
ಕುತ್ತಿಗೆಯ ಬಾಗಿನ ಮೇಲೆ ಮುದ್ದಿಸುವಾಗ
ಹೌದೌದು
ಪ್ರಿಯೆ, ಕವಿತೆ....
ಇದೂ ಕೂಡ.

* * *

## 4. ನನ್ನ ಪುಟ್ಟ ಮಗಳು ಅಳು ನಿಲ್ಲಿಸಿದಾಗ

ನನ್ನ **ಪುಟ್ಟ ಮಗಳು** ಅಳು ನಿಲ್ಲಿಸಿದಾಗ,
ಸುಯ್ಯನ್ನೋ ಪಶ್ಚಿಮದ ಗಾಳಿ ಸುಮ್ಮನಾಗುತ್ತದೆ,
ಹಾಗೇ ಮೆತ್ತಗೆ ಮೈಚಾಚಿ ಶರತ್ಕಾಲದ
ಎಲೆಗಳ ಹಾಸಿನ ಮೇಲೆ ಭೂಮಿಯ ಜೊತೆ ವಿಶ್ರಮಿಸುತ್ತದೆ.

ನನ್ನ **ಪುಟ್ಟ ಮಗಳು** ಅಳು ನಿಲ್ಲಿಸಿದಾಗ,
ಸಮುದ್ರದ ಮೇಲಿನ ಸುಂಟರಗಾಳಿ ಮುಂದೆ ಸಾಗುತ್ತದೆ.
ಸಿಡಿಮಿಡಿಗೊಂಡ ಕಡೆಯ ಅಲೆಯೊಂದು
ಐನ್ಸ್ಟೂಥಿಯಾಃ ಕಡಲ ದಡಕ್ಕೆ ನೊರೆ ನೊರೆಯಾಗಿ ಹರಡಿ
ಮರಳ ಮೇಲೆ ತಿದ್ದಿದ ಗಾಯದ ಗುರುತುಗಳನ್ನೆಲ್ಲಾ ಅಳಿಸಿ
ಹೊಸ ಕಥೆಗೆ ತಯಾರಾಗುತ್ತದೆ.

ನನ್ನ **ಪುಟ್ಟ ಮಗಳು** ಅಳು ನಿಲ್ಲಿಸಿದಾಗ,
ಲಾರ್ಕ್ ಪಕ್ಷಿಗಳು ನಿಧಾನವಾಗಿ ವಾಲ್ನಟ್ ಮರಕ್ಕೆ ಹಿಂದಿರುಗುತ್ತವೆ.
ಅವು ಒಂದಕ್ಕೊಂದು ಸೀಟಿ ಹೊಡೆದುಕೊಳ್ಳುತ್ತವೆ,
ರಂಗೇರಿದ ಆಕಾಶದತ್ತ ದೂರದ ರೈಲು ಹಾದು ಹೋಗುತ್ತಿದ್ದ ಹಾಗೇ.

ನನ್ನ **ಪುಟ್ಟ ಮಗಳು** ಅಳು ನಿಲ್ಲಿಸಿದಾಗ,
ಮಳೆಯಲ್ಲಿ ತೊಪ್ಪೆ ತೊಯ್ದು
ನಾನು ಮನೆಗೆ ಹಿಂದಿರುಗುತ್ತೇನೆ.
ಅಮ್ಮ, ತನ್ನ ನಗುವಿನಷ್ಟೇ ಅಗಲದ ಟವಲ್ಲನ್ನು
ನೀಡಿ ಬರಮಾಡಿಕೊಳ್ಳುತ್ತಾಳೆ.
ಹಿಂದೆಯೇ ಬಾಗಿಲು ಮುಚ್ಚುತ್ತಾಳೆ ಮೆಲ್ಲಗೆ
ಒಳಗಿನ ಕಾವ ಉಳಿಸಿಕೊಳ್ಳಲು ಬೆಚ್ಚಗೆ.



# ರಂಗಭೂಮಿಗೆ ಸ್ತ್ರೀ ಪ್ರವೇಶ

## ಅಸ್ತಿತ್ವ-ಬದುಕು-ಸಾಧನೆ-ಅಭಿವ್ಯಕ್ತಿ

■ ಎನ್. ಮಂಗಳಾ

*ಹಿಂದಿನ ಸಂಚಿಕೆಯಿಂದ ಮುಂದುವರೆದ ಭಾಗ*

ಕೊಣ್ಣೂರು ಶಿವಮೂರ್ತಿ ಸ್ವಾಮಿಗಳು ತಮ್ಮ ಸಂಘಕ್ಕೆ ಸ್ತ್ರೀಯರನ್ನು ಕರೆತರಲು ನಿರ್ಧರಿಸಿ ಅಮ್ಮಣಗಿಯ ಬಳ್ಳಾರಿ ಬಸಪ್ಪನನ್ನು ಕಳುಹಿಸಿ ಬಳ್ಳಾರಿಯಿಂದ ಲಕ್ಷ್ಮವ್ವ ಎಂಬ ಕಲಾವಿದೆಯನ್ನು ಕರೆಸಿದರು. ಲಕ್ಷ್ಮಾಸಾನಿಯ ಪ್ರವೇಶ ಕನ್ನಡರಂಗಭೂಮಿಯಲ್ಲಿ ಕ್ರಾಂತಿಕಾರಕ ಬದಲಾವಣೆ. ಆದರೆ ಸ್ಥೂಲ ಮೈಕಟ್ಟಿನಿಂದಾಗಿ ಈಕೆ ಮತ್ತು ಈಕೆಯ ಪಾತ್ರ ಪ್ರೇಕ್ಷಕರಿಗೆ ಒಪ್ಪಿತವಾಗಲಿಲ್ಲ. ಅಂದರೆ ಹೆಣ್ಣೆಂದರೆ ಹೀಗೇ.... ಇರಬೇಕು ಎಂದು ಅಪೇಕ್ಷಿಸುವ ಸಮಾಜ ಅಲ್ಲಿತ್ತು. ಸಮಾಜ ಬೇಡುವಂತಹ ರೂಪದ ಸ್ತ್ರೀಯರಿಗೆ ಮಾತ್ರ ಅವಕಾಶ ಮತ್ತು ಪ್ರಾಮುಖ್ಯ ಎಂಬುದನ್ನು ಗಮನಿಸಬಹುದು. ಅಂತರಂಗದ ಅಭಿವ್ಯಕ್ತಿಗಿಂತ ಬಾಹ್ಯರೂಪ ನೀಡುವ ಮುದ, ಮಜಗಳೇ ಅವತ್ತಿನ ಪ್ರೇಕ್ಷಕರಿಗೂ ಮುಖ್ಯವಾಗಿತ್ತು ಎಂಬುದು ಗಮನಾರ್ಹ. ಎಂಥದ್ದೇ ಸಂದರ್ಭದಲ್ಲಿಯೂ ನುಸುಳಿ ತಮ್ಮ ಅಧಿಪತ್ಯ ಸ್ಥಾಪಿಸಿಕೊಳ್ಳುವ ಪುರುಷರು ಇಲ್ಲಿ ತಮ್ಮ ಅಭಿರುಚಿಗೆ ತಕ್ಕಂತೆ ರಂಗದ ಮೇಲಿರುವ ಸ್ತ್ರೀಯರ ಉಳಿವು ಅಳಿವುಗಳನ್ನು ನಿರ್ಧರಿಸುತ್ತಿದ್ದರು. ಹೀಗಾಗಿ ಮೊದಲಿಗೆ ಪ್ರವೇಶ ಪಡೆದ ಲಕ್ಷ್ಮಾಸಾನಿ ಚಿಲ್ಲರೆ ಪಾತ್ರಗಳಿಗಾಗಿ ಉಳಿದುಕೊಂಡಳೇ ವಿನಃ ಮುಖ್ಯ ಪಾತ್ರಗಳಿಂದ ವಂಚಿತಳಾದಳು. ಈ ಸಂದರ್ಭದಲ್ಲಿ ಮತ್ತೊಬ್ಬ ನಟಿಯ ಹುಡುಕಾಟದಲ್ಲಿದ್ದಾಗ ಗುರುಲಿಂಗಪ್ಪ ಗೊಂಬಿಯ ನೆರವಿನಿಂದ ಯಲ್ಲೂಬಾಯಿ ಗುಳೇದಗುಡ್ಡ ಎಂಬ ಕಲಾವಿದೆ ದೊರೆಯುತ್ತಾರೆ. ದಾಸರ ಮನೆತನದವರಾದ ಈಕೆ ಹುಟ್ಟಿನಿಂದಲೇ ಸುಂದರ ರೂಪ ಮತ್ತು ಸುಮಧುರ ಕಂಠವನ್ನು ಹೊಂದಿದವರಾಗಿದ್ದು ಚಿಕ್ಕಂದಿನಲ್ಲಿ ತಾಯಿಯನ್ನು ಕಳೆದುಕೊಂಡು, ನಂತರದ ದಿನಗಳಲ್ಲಿ ಅನಾಥೆಯಾದಾಗ ಗುಳೇದಗುಡ್ಡ ಗುರುಲಿಂಗಪ್ಪ ಎಂಬಾತ ಈಕೆಯ ರೂಪಕ್ಕೆ, ಹಾಡುಗಾರಿಕೆಗೆ ಮನಸೋತು ನಾಟಕ ಮಂಡಳಿಗೆ ಕರೆತರುತ್ತಾನೆ. ಹೀಗೆ ಮತ್ತೊಂದು ನಟಿಯ ಪ್ರವೇಶವಾಗುತ್ತದೆ.

ಹಾಗೆ ನೋಡಿದರೆ ಕರ್ನಾಟಕದಲ್ಲಿ ಮೊದಲು ರಂಗದ ಮೇಲೆ ಬಂದ ನಟಿ ಯಾರು ಎಂಬ ಬಗ್ಗೆ ಹೇಳಿಕೆಗಳು ಭಿನ್ನವಾಗಿವೆ. ಪಂಡಿತ ಸಿ.ವೈ. ಕವಲಿಯವರ ಹಸ್ತಪ್ರತಿಯ ಆಧಾರದ ಮೇಲೆ ಹೆಚ್.ಕೆ. ರಂಗನಾಥ್ ಅವರು ಹೇಳುವ ಪ್ರಕಾರ ಯಲ್ಲೂಬಾಯಿ ಗುಳೇದಗುಡ್ಡ ಕೊಣ್ಣೂರ್‌ಕರ್ ನಾಟಕ ಕಂಪನಿಯನ್ನು ಸೇರಿದ ಪ್ರಥಮ ನಟಿ. ಈ ಕಂಪನಿ 1901 ರಿಂದ 1921ರ ವರೆಗೆ ಅಸ್ತಿತ್ವದಲ್ಲಿತ್ತು. ಈಕೆ ಈ ಸಂದರ್ಭದಲ್ಲಿ ಪ್ರವೇಶಿಸಿದ್ದಾಳೆ. ಜೊತೆಗೆ 1891ರಲ್ಲಿ ಗುಬ್ಬಿ ಕಂಪೆನಿಯಲ್ಲಿ ರಾಜಮ್ಮ ಎಂಬ ನಟಿ ಇದ್ದುದನ್ನು ಪ್ರಸ್ತಾಪಿಸುತ್ತಾರೆ. ಈ ಸಿಕ್ಕ ಮಾಹಿತಿಗಳ ಆಧಾರದ ಮೇಲೆ ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿಯ ಮೊದಲ ನಟಿ ಯಲ್ಲೂಬಾಯಿ ಗುಳೇದಗುಡ್ಡ ಎಂತಲೂ, ದಕ್ಷಿಣಕರ್ನಾಟಕದ ಮೊದಲ ನಟಿ ಗುಬ್ಬಿ ಕಂಪನಿಯನ್ನು 1891ರಲ್ಲಿ ಸೇರಿದ ರಾಜಮ್ಮನೆಂದೂ ಭಾವಿಸಿದಲ್ಲಿ ಕನ್ನಡ ರಂಗಭೂಮಿಯ ಮೊದಲ ನಟಿ ರಾಜಮ್ಮನೆಂದೇ ನಿರ್ಧರಿಸಬಹುದಾಗಿದೆ. ಕನ್ನಡ ರಂಗಭೂಮಿಯ ಪ್ರಾರಂಭದ ನಟಿಯರು-ರಾಜಮ್ಮ, ಯಲ್ಲೂಬಾಯಿ, ರುದ್ರಾಸಾನಿ, ಪಾರ್ವತಮ್ಮ, ಶೇಷಮ್ಮ, ಲೀಲಾವತಿ, ಮಳವಳ್ಳಿ ಸುಂದ್ರಮ್ಮ, ಜಿ. ಸುಂದರಮ್ಮ, ಗಂಗೂಬಾಯಿ ಗುಳೇದಗುಡ್ಡ. ಈ ನಟಿಯರ ಬಗ್ಗೆ ಹೆಚ್ಚು ನಿಖರವಾದ ಮಾಹಿತಿಗಳು ಇಲ್ಲ. ನಂತರದ ತಲೆಮಾರುಗಳನ್ನು ಹೊಂದಿರುವಂತಹ ನಟಿಯರ ಬಗ್ಗೆ ಒಂದಿಷ್ಟು ಸಂಗ್ರಹಕ್ಕೆ ಲಭ್ಯವೆನಿಸುತ್ತದೆಯಷ್ಟೆ.

ಗುಬ್ಬಿ ಕಂಪನಿಯ ಚಂದಣ್ಣನವರು ಖರೀದಿಸಿದ ಹೆಣ್ಣು ಜಿ. ಸುಂದರಮ್ಮ. ಅಂದರೆ ಮೂವರು ಹೆಣ್ಣು ಮಕ್ಕಳನ್ನು ಹೆತ್ತು ತಂದೆ ತಾಯಿಯರಿಗೆ ಊಟ ಕೊಡೋದೇ ಕಷ್ಟಕರವೆನಿಸಿದಾಗ ಆ ತಂದೆತಾಯಿಗಳು ಬಂದು ಚಂದಣ್ಣನವರನ್ನು, ತಮ್ಮ ಒಂದು ಹೆಣ್ಣು ಕೂಸನ್ನು ಕೊಂಡುಕೊಳ್ಳಿ ಅಂತ ಬೇಡಿಕೊಂಡರಂತೆ. ಅದೂ ಕೇವಲ ಒಂದು ಮೊರ ಅಕ್ಕಿ ಮತ್ತು 25ರೂಗಳಿಗೆ. ಹೀಗೆ ಮಾರಾಟವಾದ ಸುಂದ್ರಮ್ಮನನ್ನು ಅದೇ ಕಂಪನಿಯಲ್ಲಿದ್ದ ಕರಿಸುಂದ್ರಮ್ಮನವರು ಆಕೆಯ ಬಟ್ಟೆ ಬಿಚ್ಚಿಸಿ ಮೈ ಮೇಲಿದ್ದ ಸುಳಿಗಳ ಲೆಕ್ಕ ಮಾಡಿ ಈಕೆಯಿಂದ ತಮಗೆ, ತಮ್ಮ ಕಂಪನಿಗೆ ಒಳ್ಳೆಯದಾಗುತ್ತದೆಂದು ಸರ್ಟಿಫಿಕೇಟ್ ಕೊಟ್ಟ ಮೇಲೆಯೇ ಚಂದ್ರಣ್ಣನವರು ಸುಂದ್ರಮ್ಮನನ್ನು ತಮ್ಮ ಕಂಪನಿಗೆ ಸೇರಿಸಿಕೊಂಡು ನಾಟಕಾಭ್ಯಾಸ ಮಾಡಿಸುತ್ತಾ ತಮ್ಮ ಕಂಪನಿಯ ಅತ್ಯುತ್ತಮ ನಟಿಯನ್ನಾಗಿ ಮಾರ್ಪಾಡು ಮಾಡಿದ್ದು, ಅದೇ ಸುಂದ್ರಮ್ಮನವರೇ ಗುಬ್ಬಿ ವೀರಣ್ಣನವರನ್ನು ಮದುವೆಯಾಗಿ ಇಡೀ ಕಂಪನಿಯ ಆಧಾರಸ್ತಂಭವಾಗಿ ನಿಂತಿದ್ದು, ತನ್ನೆರಡು ಹೆಣ್ಣುಮಕ್ಕಳನ್ನು ರಂಗಭೂಮಿಗೆ ಧಾರೆಯೆರೆದದ್ದು.

ಇಲ್ಲಿ ನಾವು ಗಮನಿಸಬೇಕಾದ ಒಂದು ಅಂಶವಿದೆ. ಅದೇನೆಂದರೆ ರಂಗಭೂಮಿ ನಟಿಯರ ಬದುಕು-ಸಾಧನೆ-ಅಭಿವ್ಯಕ್ತಿ ಈ ಮೂರೂ ಒಂದಕ್ಕೊಂದು ತಳುಕು ಹಾಕಿಕೊಂಡಿವೆ. ನಾವು ಕೇವಲ ಅವರ ಅಭಿವ್ಯಕ್ತಿ ಮತ್ತು ಸಾಧನೆಗಳ ಬಗ್ಗೆ ಮಾತ್ರ ಮಾತನಾಡುವುದಕ್ಕೆ ಬರುವುದಿಲ್ಲ. ಪ್ರತಿಯೊಬ್ಬರ ಪ್ರತಿಹೆಜ್ಜೆಗೂ ರಿಂಗಣಿಸುವ ಗೆಜ್ಜೆಗಳ ನೂರು ಮಾತಿದೆ. ನೂರು ನೋವಿದೆ. ಕಹಿ ವಾಸ್ತವವಿದೆ. ಹಾಗಾಗಿ ಇಲ್ಲಿ ಪ್ರತಿಯೊಬ್ಬರ ಬದುಕೂ ಅವರ ಅಭಿವ್ಯಕ್ತಿ ಸಾಧನೆಗಳಷ್ಟೆ ಮುಖ್ಯವಾಗಿಬಿಡುತ್ತದೆ.

ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ ತನ್ನ ಹಾಡುಗಾರಿಕೆಯಿಂದ ಹೊಸ ಸಂಚಲನವನ್ನೇ ಹುಟ್ಟುಹಾಕಿದಂಥ ನಟಿ ಗಂಗೂಬಾಯಿ ಗುಳೇದಗುಡ್ಡ. ಈಕೆ ರಂಗಭೂಮಿಗೆ ಬಂದದ್ದೇ ಆಕಸ್ಮಿಕ. ಬಾಗಿಲುಕೋಟೆಯ ರೈಲುನಿಲ್ದಾಣದ ಹತ್ತಿರವಿದ್ದ ತಿಪ್ಪೇಗುಂಡಿಯಲ್ಲಿ ಕಣ್ಮುಚ್ಚಿ ಇಹಲೋಕದ ಯಾತ್ರೆಯನ್ನು ಮುಗಿಸಿಬಿಡಬೇಕಾಗಿದ್ದ ಮುಗ್ಧ ಹಸುಳೆ ಆಕಸ್ಮಿಕವಾಗಿ ಅಲ್ಲಿಯೇ ಹಾದುಹೋಗುತ್ತಿದ್ದ ಹೆಸರಾಂತ ನಟಿ ಯಲ್ಲೂಬಾಯಿ ಗುಳೇದಗುಡ್ಡ ಕಣ್ಣಿಗೆ ಬಿದ್ದದ್ದು ಯೋಗಾಯೋಗ. ಹೃದಯವಂತೆ ಯಲ್ಲೂಬಾಯಿ ಆ ಮಗುವನ್ನು ಎತ್ತಿಕೊಂಡು ಬಂದವರೇ ಗಂಗೂಬಾಯಿ ಎಂದು ಹೆಸರಿಟ್ಟು ತಾಯಿಯಾಗಿ ನಿಂತು ಕೊಂಡದ್ದು ಬದುಕಿನ ರಂಗದ ಮೇಲೆ ಆಕೆ ತೋರಿದ ತಾಯ್ತನದ ಅಭಿವ್ಯಕ್ತಿ. ಹಾಗೇ ಸೈಡ್‌ವಿಂಗ್‌ನಲ್ಲಿ ಮಲಗುತ್ತಿದ್ದ ಮಗು ದಿನಕಳೆದಂತೆ ಅಂಬೆಗಾಲಿಡುತ್ತ ರಂಗವೇರಿದ್ದು, ನಂತರ ಅದ್ಭುತ ನಟಿಯಾಗಿ ರೂಪುಗೊಂಡದ್ದು, ಮಧ್ವಾರಾವ್ ದೇಶಪಾಂಡೆಯನ್ನು ಪತಿಯನ್ನಾಗಿ

ಸ್ವೀಕರಿಸಿದ್ದು, ನಂತರ ಶ್ರೀಕೃಷ್ಣ ನಾಟಕ ಮಂಡಳಿಯ ಒಡತಿಯಾದದ್ದು ಈಗ ಚರಿತ್ರೆ.

ಹೀಗೆ ರಂಗಭೂಮಿಯಲ್ಲಿ ರಾಣಿಯಾಗಿ ಮೆರೆದು ಅನಾರೋಗ್ಯಕ್ಕೆ ತುತ್ತಾಗಿ ಹಾಸಿಗೆ ಹಿಡಿದಿದ್ದರೂ ತಮ್ಮ ಅಭಿವ್ಯಕ್ತಿಯ ತುಡಿತದಿಂದಾಗಿ ಮತ್ತು ಕಂಪನಿಗೆ ನಷ್ಟವಾಗ ಬಾರದೆಂಬ ಕಾರಣದಿಂದಾಗಿ ರಾತ್ರಿಯಾಗುತ್ತಲೇ ಬಣ್ಣ ಹಚ್ಚುತ್ತಿದ್ದರು. ಹಗಲಿಡೀ ಶಕ್ತಿ ಉಡುಗಿ ಹಾಸಿಗೆಗೆ ಅಂಟಿ ಮಲಗಿರುತ್ತಿದ್ದ ಈ ಅಭಿನೇತ್ರಿ ನೆಪ ಮಾತ್ರಕ್ಕೆ ಆಹಾರ ಸೇವಿಸುತ್ತಿದ್ದರು. ಬಣ್ಣ ಹಚ್ಚಿಕೊಂಡು ರಂಗದ ಮೇಲೇರಿದ ತಕ್ಷಣ ಅಲ್ಲಿ ಅನಾರೋಗ್ಯದಿಂದ ಬಿದ್ದದ್ದ ಗಂಗೂಬಾಯಿ ಈಕೆಯೇ? ಎಂದು ಅನುಮಾನ ಬರುವ ಹಾಗೆ ಅಭಿನಯದಲ್ಲಿ ತನ್ಮಯತೆ ತೋರುತ್ತಿದ್ದರು.

ಮೇಲಿನ ಸಂದರ್ಭಗಳನ್ನು ಗಮನಿಸಿದಾಗ ನಮಗೆ ಗೋಚರ ವಾಗುವ ಹಲವು ಸಂಗತಿಗಳಿವೆ. ಸ್ತ್ರೀಯರು ರಂಗಪ್ರವೇಶ ಮಾಡಿದ್ದು ಕೂಡ ರಂಗಭೂಮಿಗೆ ಸ್ತ್ರೀಯರು ಅನಿವಾರ್ಯ ಅಂತ ಅನಿಸಿದ ಸಂದರ್ಭದಲ್ಲಿಯೇ ಹೊರತು, ಸ್ತ್ರೀಯರಿಗೆ ಅದು ಅವರ ಅಪೇಕ್ಷೆಯೆಂದಾಗಲೀ, ಆಯ್ಕೆಯೆಂದಾಗಲೀ ಮತ್ತು ಅಭಿವ್ಯಕ್ತಿಯ ತುಡಿತವೆಂದಾಗಲೀ ಅಲ್ಲ. ಸ್ತ್ರೀಯರನ್ನು ಅವತ್ತಿನ ರಂಗಭೂಮಿಯಾಗಲೀ, ಸಮಾಜವಾಗಲೀ ಗೌರವಯುತವಾಗಿ ಘನತೆಯಿಂದೇನೂ ನಡೆಸಿಕೊಂಡಿಲ್ಲ. ಕುಡಿಯಲು ನೀರು ಕೂಡ ಕೊಡದಂತಹ ಸಮಾಜವನ್ನು ಅವತ್ತಿನ ನಟಿಯರು ಎದುರಿಸಿದ್ದಾರೆ. ಮತ್ತು ರಂಗಭೂಮಿಗೆ ಬಂದವರು ಕೂಡ ಆರ್ಥಿಕವಾಗಿ ತೀರ ಅಶಕ್ತರಾದವರು ಅಥವಾ ವಿಧವೆಯರು, ಅನಾಥರು, ಇಲ್ಲವೇ ಅವತ್ತಿನ ದೇವದಾಸಿಯರು. ರಂಗಭೂಮಿ ಅವತ್ತಿನ ಅವರ ಬದುಕಿಗೆ ಒಂದು ದಾರಿಯಂತೆ ಕಂಡುಬಂದಿತೇ ಹೊರತು ತುಡಿತವಾಗಿಯಲ್ಲ. ಹೀಗೇ ಸಮಾಜದ ಜೊತೆ ಹೋರಾಡುತ್ತಲೇ ಅವಳು ರಂಗಭೂಮಿಯಲ್ಲಿ ಉಳಿದು ಕೊಂಡಳು. ಸಮಾಜದ ಬೇರೆ ಬೇರೆ ಕಡೆ ಹೋಗಿ ಏಕಾಂಗಿಯಾಗಿ ಬದುಕು ಹುಡುಕಿಕೊಳ್ಳುವುದಕ್ಕಿಂತ ರಂಗಭೂಮಿಯಲ್ಲಿ ಗುಂಪಿನೊಡನೆ ಇರುವುದು ಹೆಚ್ಚು ಆಪ್ತವೆನಿಸಿರಲೂಬಹುದು. ಕೆಲವೊಮ್ಮೆ ರಂಗಭೂಮಿಯಿಂದಲೇ ಸಂಸಾರವನ್ನೂ ಪಡೆದುಕೊಂಡಳು. ಅಲ್ಲೂ ಅಷ್ಟೆ, ಅದು ಅವಳ ಆಯ್ಕೆಗಿಂತಲೂ ಅನಿವಾರ್ಯ ಆಗಿಬಿಟ್ಟ ಸಂದರ್ಭಗಳೇ ಹೆಚ್ಚು. ಅಷ್ಟಾದರೂ ಬಹಳಷ್ಟು ಕಡೆ ಅವಳು ಉಪಪತ್ನಿಯ ಪಟ್ಟಕ್ಕೆ ಮೀಸಲಾಗಬೇಕಾಯಿತೇ ಹೊರತು ಹೆಂಡತಿಯಾಗಿ ಅಲ್ಲ.

ಗುಬ್ಬಿ ವೀರಣ್ಣನವರು ಮೊದಲ ಪತ್ನಿ ಅನಾರೋಗ್ಯದಿಂದ ತೀರಿಕೊಂಡ ನಂತರ ಚಂದಣ್ಣನವರ ಕಂಪನಿಯಲ್ಲಿ ಕೆಲಸಮಾಡುತ್ತಿದ್ದಾಗ ಅಲ್ಲಿ ನಟಿಯಾಗಿದ್ದ ಸುಂದ್ರಮ್ಮನವರನ್ನು ಮದುವೆಯಾದರು. ಕಿತ್ತು ತಿನ್ನುವ ಬಡತನದ ಬದುಕಿಗೆ ಜೊತೆಗಾತಿಯಾದ ಜಿ. ಸುಂದ್ರಮ್ಮನವರು ಗುಬ್ಬಿ ವೀರಣ್ಣನವರಿಗೆ ಬೆಳಕಾಗಿ ಬಂದವರು. ಆದರೆ ವೀರಣ್ಣನವರ ಮನೆಯವರು ಸುಂದ್ರಮ್ಮನನ್ನು ಒಪ್ಪಿಕೊಳ್ಳಲೇ ಇಲ್ಲ. ಬೇರೆ ಮದುವೆ ಆಗಬೇಕೆಂದು ದುಂಬಾಲು ಬೀಳುವರು. ಸುಂದ್ರಮ್ಮನವರನ್ನು ಆಗಿದ್ದೇನಲ್ಲ ಎಂದಾಗ 'ನಾಟಕದವಳು ಹೆಂಡತಿ ಹೇಗಾದಾಳು? ಅವಳು ನಾಟಕಕ್ಕಷ್ಟೆ ಪೆಂಡತಿ ಅಂತ ಒಬ್ಬಳು ಬೇಡವೇ'? ಎಂದು ಹಿಂಸೆ ಮಾಡುತ್ತಿರುವಾಗ ಅದನ್ನು ನೋಡಲಾಗದ ಸುಂದ್ರಮ್ಮನವರೇ ವೀರಣ್ಣನವರಿಗೆ ಭದ್ರಮ್ಮ ಎಂಬ ಹುಡುಗಿಯನ್ನು ಹುಡುಕಿ ಮದುವೆ ಮಾಡಿಸುತ್ತಾರೆ. ಹೀಗೆ ನಾಟಕದಲ್ಲಿ ಬೇಕಾದಷ್ಟು ಪಾತ್ರಗಳನ್ನು ಲೀಲಾಜಾಲವಾಗಿ ನಟಿಸಿ ಸೈ ಅನಿಸಿಕೊಂಡ ಸುಂದ್ರಮ್ಮನವರಿಗೆ ನಿಜಜೀವನದಲ್ಲಿ ಹೆಂಡತಿ ಪಾತ್ರ ದೊರಕುವುದಿಲ್ಲ. ಇಷ್ಟೆಲ್ಲ ಘಟಿಸಿದ ನಂತರವೂ ವೀರಣ್ಣನವರು ಬಿ. ಜಯಮ್ಮ ಎಂಬ ನಟಿಯನ್ನು ತಮ್ಮ ಕಂಪನಿಯಲ್ಲಿಯೇ ಉಳಿಸಿಕೊಳ್ಳುವ ಸಲುವಾಗಿ ಆಕೆಯನ್ನೂ ಮದುವೆಯಾಗಿಬಿಡುತ್ತಾರೆ.



ಸೃಜನಶೀಲತೆಗೆ ಯಾವಾಗಲೂ ಕಡಿಮೆ ಆವರಣ. ಅಂತಹ ಸೃಜನಶೀಲಕ್ರಿಯೆಯಲ್ಲಿ ತೊಡಗಿಕೊಂಡಿರುವ ರಂಗಭೂಮಿ ನಟಿಯರಿಗಂತು ಬದುಕುವ ಆವರಣವನ್ನೇ ಪುಟ್ಟದು ಮಾಡಿಬಿಡುವ ಸಮಾಜದ ಸವಾರಿ ಅಂದಿನಿಂದ ಇಂದಿನವರೆಗೂ ನಿರಂತರವಾಗಿ ನಡೆದಿದೆ.

ಇಂತಹ ಒತ್ತಡದ ಬದುಕಿನ ನಡುವೆ ತನ್ನ ಅಭಿವ್ಯಕ್ತಿಯನ್ನು ಜಾಗೃತವಾಗಿಟ್ಟುಕೊಳ್ಳಬೇಕಾದ ಸವಾಲೂ ಆಕೆಗಿತ್ತು. ಅಲ್ಲದೇ ಪುರುಷರ ಆಲೋಚನೆಗಳಲ್ಲಿ ಬರುವಂತಹ ಸ್ತ್ರೀಯರಂತೆ, ತೀರ ಅಲಂಕಾರ ಪ್ರಿಯರಂತೆ, ಯಾವಾಗಲೂ ನಾಜೂಕಾಗಿ ಒನಪು ವಯ್ಯಾರಗಳಿಂದಲೇ ಶೋಭಿಸುವೆವು ಎಂಬಂತೆ, ಇಲ್ಲವೇ ಅಳುಮುಂಜಿಯರ ಹಾಗೆ ಗೋಳಾಡುವವರಂತೆ, ಇಲ್ಲ ಅದಕ್ಕೆ ತದ್ವಿರುದ್ಧವಾಗಿ ತೀರಾ ಅಹಂಕಾರ ದಿಂದ ಕೂಡಿದ ಬಜಾರಿಯಂತೆ ಕಾಣಿಸಿಕೊಳ್ಳುವುದು ತಮ್ಮ ಕರ್ತವ್ಯವೆಂಬಂತೆ ನಿರ್ವಹಿಸಬೇಕಾದ ಅನಿವಾರ್ಯತೆಗಳೂ ಇದ್ದವು. ಅದನ್ನೇ ನಂಬಿಕೊಂಡು ಪ್ರಾಮಾಣಿಕವಾಗಿ ಅಭಿವ್ಯಕ್ತಿಸಿ ಜನಪ್ರಿಯರಾಗಿದ್ದರು. ಇವುಗಳ ಮಧ್ಯೆಯೂ ಅದಕ್ಕೆ ಅಪವಾದವೆಂಬಂತೆ ಇಂದಿಗೂ ಹಿಂದಿನ ತಲೆಮಾರಿನ ಜನರು ನೆನೆಸಿಕೊಳ್ಳುವಂತಹ ಅನೇಕ ಪಾತ್ರಗಳನ್ನ ಕಲಾವಿದೆಯರು ನೀಡಿದ್ದಾರೆ. ಬಹಳಷ್ಟು ಕಲಾವಿದೆಯರು ಇಂದಿಗೂ ನೆನಪಿನಲ್ಲಿ ಉಳಿದಿರುವುದು ಅವರ ರಂಗಸಂಗೀತದಿಂದ.

ಈ ಸಂದರ್ಭದಲ್ಲಿ ಮಾಲತಮ್ಮನವರು ಹೇಳುವ ಮಾತೊಂದು ನೆನಪಾಗುತ್ತದೆ. ಆಕೆ ಕೈಕೇಯಿ ಪಾತ್ರ ಮಾಡುವಾಗ, ಮಂಥರೆ ರಾಮನ ವಿರುದ್ಧ ಆಕೆಯ ಮನಸ್ಸನ್ನು ಕಲಕುವುದಕ್ಕೂ ಮೊದಲು, ತಾನೆಷ್ಟು ರಾಮನನ್ನು ಪ್ರೀತಿಸುತ್ತೇನೆ, ನನ್ನ ಮಗನಂತೆಯೇ ಕಾಣುತ್ತೇನೆ ಎಂಬ ಅಂಶಕ್ಕೆ ಒತ್ತು ಕೊಟ್ಟು ಅಭಿನಯಿಸುವುದಕ್ಕೆ ಹಾತೊರೆಯುತ್ತಿದ್ದರಂತೆ. ನಂತರ ಮಂಥರೆ ಅವರ ಕಿವಿಯೊಳಗೆ ಅಧಿಕಾರದ ಆಸೆ ಬಿತ್ತಿದ ಮೇಲೆ ಸಂಪೂರ್ಣ ಬದಲಾಗಿಬಿಡುವ ಕೈಕೇಯಿಯನ್ನು ಅಭಿನಯಿಸುತ್ತಿದ್ದರಂತೆ. ಇಲ್ಲಿ ನಟಿಯೊಬ್ಬಳಿಗೆ ಯಾವಾಗಲೂ stereotype ಆಗಿ ಚಿತ್ರಿತಗೊಳ್ಳುವ ಕೈಕೇಯಿಯನ್ನು ಅಭಿನಯಿಸುವುದಕ್ಕಿಂತ ಅವಳೊಳಗೆ ಇರುವ ತಾಯ್ತನದ ಅಂಶಕ್ಕೂ ಒತ್ತು ಕೊಡಬೇಕೆಂಬ ಆಕಾಂಕ್ಷೆ ಆಕೆಯ ಆಂತರ್ಯದ ಅಭಿವ್ಯಕ್ತಿ ಆಗುತ್ತದೆ.

ಇದರ ಜೊತೆಗೆ ರಂಗಭೂಮಿಯಲ್ಲಿ ಸ್ತ್ರೀಯರು ದುಡಿಯಲು ಪ್ರಾರಂಭಿಸಿದ ನಂತರ ಅವರೊಳಗೆ ರಂಗಭೂಮಿಗೆಂದು ಹುಟ್ಟಿಕೊಂಡ ಬದ್ಧತೆ ನಿಜಕ್ಕೂ ಆಶ್ಚರ್ಯ ತಮ್ಮ ವೈಯಕ್ತಿಕ ಬದುಕಿನ ಸುಖಗಳನ್ನು ಬದಿಗಿಟ್ಟು ಬಣ್ಣ ಹಚ್ಚಿದ್ದಾರೆ. ಹಾಸಿಗೆ ಹಿಡಿದು ಮಲಗಿದ್ದರೂ ಬಣ್ಣ ಹಚ್ಚುತ್ತಲೇ ಇದ್ದ ಗಂಗೂಬಾಯಿ ಉದಾಹರಣೆ ಒಂದು ಕಡೆಯಾದರೆ,



ವಿಪರೀತ ಚಳಿಯಿಂದ ಜ್ವರಪೀಡಿತರಾಗಿದ್ದ ಜಿ. ಸುಂದ್ರಮ್ಮನವರಿಗೆ ಹಾಸಿಗೆಯಿಂದ ಎದ್ದೇಳಲು ಸಾಧ್ಯವೇ ಇಲ್ಲ ಎಂಬಂಥ ಸ್ಥಿತಿಯಲ್ಲಿ ಬೇರೆ ನಟಿಯರ್‍ಯಾರೂ ಆ ಪಾತ್ರವನ್ನು ನಿಭಾಯಿಸಲು ಅಸಾಧ್ಯವೆನಿಸಿ, ಗುಟುಕು ಬ್ರಾಂದಿ ಕುಡಿಸಿ, ಕಿವಿಯೊಳಗೆ ಪ್ರಾರಂಭದ ಎರಡು ಸಾಲುಗಳನ್ನು ಹೇಳಿ ರಂಗಕ್ಕೆ ತಳ್ಳಿಬಿಡುತ್ತಿದ್ದ ಉದಾಹರಣೆಗಳೂ ಇವೆ. ಮೂರು ಹಾಳೆಯ ಚಂದ್ರಮತಿಯ ಸ್ವಗತವನ್ನು ಅಭಿನಯಿಸಿ ಸೈಡ್‌ವಿಂಗ್‌ಗೆ ಬಂದ ತಕ್ಷಣ ಮತ್ತೆ ಮುಂದಿನ ಪ್ರವೇಶಕ್ಕೆ ಎಲ್ಲರೂ ಸೇರಿ ಸಿದ್ಧಮಾಡುತ್ತಿದ್ದರಂತೆ. ಈ ರೀತಿಯ ಕಷ್ಟ, ಹಟ, ಸವಾಲು ಎಲ್ಲವೂ ತನ್ನೊಳಗಿನ ತುಡಿತ ಮತ್ತು ರಂಗಭೂಮಿಯ ಬಗ್ಗೆ ಅವರುಗಳಿಗಿದ್ದ ಬದ್ಧತೆಯನ್ನು ತೋರುತ್ತದೆ.

ಸೈಡ್‌ವಿಂಗ್‌ನಲ್ಲಿ ಜೋಲಿಕಟ್ಟಿ ಮಗುವಿಗೆ ಹಾಲುಣಿಸುತ್ತ ಜೋಕಾಲಿಯಲ್ಲಿ ಮಗುವನ್ನು ತೂಗುತ್ತಾ, ಅಲ್ಲಿಯೇ ಊಟ ಮಾಡಿಸುತ್ತಾ, ತೊಡೆಗೆ ಬಂದೊರಗುವ ಮಕ್ಕಳನ್ನು ತಟ್ಟುತ್ತಾ, ಅವರ ಉಚ್ಚೆ ಕಕ್ಕಗಳನ್ನು ತೊಳೆಯುತ್ತಲೇ ರಂಗದ ಮೇಲೆ ತಮ್ಮ entry ಬಂದ ತಕ್ಷಣ ಪಾತ್ರವಾಗಿ ಅಭಿನಯಿಸಿ, ಮುಗಿದ ತಕ್ಷಣ exit ಆಗಿ ಮತ್ತೆ ತಮ್ಮ ಮಕ್ಕಳ ಸಂಗೋಪನೆ ಕಾರ್ಯದಲ್ಲಿ ಮುಳುಗುತ್ತಿದ್ದ ನಟಿಯರ ಸವಿಸ್ತಾರ ಕತೆಗಳಿವೆ. ಎಷ್ಟೋ ಸಲ ಆ ಮಕ್ಕಳಿಗೂ ವೇಷ ಹಾಕಿ ರಂಗಕ್ಕೆ ಕಳಿಸಬೇಕಾದ ಜವಾಬ್ದಾರಿಗಳೂ ಇದ್ದವು. ರಾತ್ರಿಯಿಡೀ ನಡೆಯುತ್ತಿದ್ದ ಆ ನಾಟಕಗಳಲ್ಲಿ ಮಕ್ಕಳ ಪಾತ್ರಧಾರಿಗಳು ಕಣ್ಣಲ್ಲಿ ನಿದ್ದೆ ತಂದುಕೊಂಡು ಆಕಳಿಸಿದಾಗ ತಾಯ್ತನ ಮಿಡಿದು ಅಲ್ಲಿಯೇ ಜಮಖಾನ ಹಾಸಿ ಮಲಗಿಸಿ, entry ಬಂದಾಗ ಎಬ್ಬಿಸಿ ರಂಗಕ್ಕೆ ಕಳಿಸುತ್ತಿದ್ದ ಉದಾಹರಣೆಗಳೂ ಇವೆ.

ಈ ನಟಿಯರಿಗೆ ರಂಗಭೂಮಿಯೇ ಎಲ್ಲವೂ ಆಗಿಬಿಟ್ಟಿತ್ತು. ಅದು ಅವರಿಗೆ ಊಟವೂ ಹೌದು, ಉಸಿರೂ ಹೌದು. ಗುಬ್ಬಿ ಕಂಪನಿಯಲ್ಲಂತೂ ಕುಟುಂಬದ ಹೆಣ್ಣುಮಕ್ಕಳೆಲ್ಲರೂ ರಂಗಭೂಮಿಗೆ ಪಾದಾರ್ಪಣೆ ಮಾಡಿಬಿಟ್ಟಿದ್ದರು. ಹೀಗೇ ರಂಗಭೂಮಿಯನ್ನೇ ಉಸಿರೆಂದು ತಿಳಿದು ಸಣ್ಣ ಮಗುವಿನಿಂದಲೂ ನಟಿಸುತ್ತ ಬಂದ ಮಾಲತಮ್ಮನವರನ್ನು ಗುಬ್ಬಿ ವೀರಣ್ಣನವರು ಆಕೆ ಒಲ್ಲದ ಗಂಡನೊಡನೆ ಮದುವೆ ಮಾಡಿಕೊಟ್ಟರು. ಗಂಡನೆನಿಸಿಕೊಂಡವರು ಮದುವೆಯ ನಂತರ ಬಣ್ಣ ಹಚ್ಚಕೂಡದೆಂಬ ಶರತ್ತು ಹಾಕಿದೊಡನೆ ಮಾಲತಮ್ಮನವರು ದುಃಖಿಸುತ್ತಾ ಅನಿವಾರ್ಯವಾಗಿ ಆತ ಹೇಳಿದಂತೆಯೇ ಬದುಕಿದರು. ಮತ್ತೆ ಬಣ್ಣ ಹಚ್ಚುವುದಿಲ್ಲವೆಂಬ ಅಪ್ಪಣೆಯನ್ನೂ ಒಪ್ಪಿಕೊಂಡರು.

ಪ್ರತಿ ದಸರಾ ಹಬ್ಬಕ್ಕೂ ಮೈಸೂರಿನ ಅರಮನೆಯಲ್ಲಿ ಗುಬ್ಬಿ ಕಂಪನಿಯ ನಾಟಕ ಇರುತ್ತಿತ್ತು. ಅಕ್ಕಮಹಾದೇವಿ ನಾಟಕ ಎಂಬುದಾಗಿ ತಿಂಗಳ ಮೊದಲಿಂದಲೇ ಪ್ರಚಾರ ಕಾರ್ಯವೂ ಭರದಿಂದ ಸಾಗಿತ್ತು. ಇನ್ನೇನು ನಾಟಕದ ದಿನ ಹತ್ತಿರ ಬರುತ್ತಿದ್ದ ಹಾಗೆ ಅಕ್ಕಮಹಾದೇವಿ ಪಾತ್ರ ಅಭಿನಯಿಸುತ್ತಿದ್ದ ಸ್ವರ್ಣಮ್ಮನವರು ಅನಾರೋಗ್ಯದ ನಿಮಿತ್ತ ಪಾತ್ರ ವಹಿಸದಂತಾದರು. ದಿಕ್ಕು ತೋಚದಂತಾದ ಕಂಪನಿ ಮಾಲತಮ್ಮನವರನ್ನು ಆ ಪಾತ್ರ ವಹಿಸಬೇಕೆಂದು ಕೇಳಿಕೊಂಡಿತು. ಗಂಡನ ಅಪ್ಪಣೆ ಇಲ್ಲದೆ ಅಭಿನಯಿಸಲಾರೆ ಎಂದ ಮಾಲತಮ್ಮನವರ ಮಾತಿಗೆ ಕಂಪನಿ ಗಂಡನ ಅಪ್ಪಣೆಗಾಗಿ, ಕಾರ್ಯನಿಮಿತ್ತ ಬೇರೆ ಊರಿನಲ್ಲಿದ್ದ ಗಂಡನಿಗೆ ತಂತಿ ಕಳಿಸಿದರು. ಆದರೆ ಆತ ಉತ್ತರಿಸಲಿಲ್ಲವಾಗಿ, ಮಾಲತಮ್ಮನವರು ಸ್ವರ್ಣಮ್ಮನನ್ನು ಕಾಣುವ ಸಲುವಾಗಿ ಮೈಸೂರಿಗೆ ಹೊರಟು ಬಂದರು. ಗಂಡನಿಂದ ಉತ್ತರ ಬಾರದೆ ಅವರು ಗೊಂದಲಕ್ಕೀಡಾದರು. ಕಡೆಗೆ ಮನಸ್ಸಿನಲ್ಲಿಯೇ ಏನಾದರಾಗಲೀ ಗುಬ್ಬಿ ವೀರಣ್ಣನವರ ಮರ್ಯಾದೆಯ ಮುಂದೆ ಎಲ್ಲವೂ ಗೌಣವೆಂದೆಣಿಸಿ, ಅಪ್ಪನ ಪೇಟವನ್ನು ಕೆಳಗಿಳಿಸಲಾರೆ ಎಂದುಕೊಂಡು ಇದೊಂದು ಬಾರಿ ನಟಿಸಿಬಿಡುವ ನಿರ್ಧಾರ ತೆಗೆದುಕೊಂಡು ತಾಲೀಮು ಪ್ರಾರಂಭಿಸಿಯೇ ಬಿಟ್ಟರು. ನಾಟಕದ ದಿನ ಅಲ್ಲಿಗೆ ಬಂದ ಆಕೆಯ ಗಂಡ ಹೇಳಿದ್ದು ಒಂದೇ ಮಾತು ನಿನಗೆ ಗಂಡಬೇಕೋ, ನಾಟಕ ಬೇಕೋ ಇಂದೇ ಆರಿಸಿಕೊ ಎಂದು. ಗಟ್ಟಿ ಮನಸ್ಸು ಮಾಡಿದ ಮಾಲತಮ್ಮ ಹೊಟ್ಟೆಯೊಳಗೆ ಕಂದಮ್ಮನಿದ್ದರೂ ಧೈರ್ಯಗೆಡದೆ ಏನಾದರಾಗಲಿ ಎಂಬಂತೆ ನನಗೆ ಇವತ್ತಿನ ನಾಟಕ ಮುಖ್ಯ. ಅದನ್ನು ಮುಗಿಸಿ ಬಣ್ಣವನ್ನು ತೆಗೆಯದೆ ನಿಮ್ಮೊಡನೆ ಬರುತ್ತೇನೆ. ಅದಕ್ಕೆ ಅವಕಾಶ ಮಾಡಿಕೊಡಿ ಎಂದು ಕೇಳಿಕೊಂಡರು. ಗಂಡ ಒಪ್ಪಲಿಲ್ಲ. ಆದರೆ ನಾಟಕದೊಳಗೆ ಪಾತ್ರ ಮಾಡಿಯೇ ತೀರುವುದೆಂದು ನಿರ್ಧರಿಸಿಕೊಂಡಿದ್ದ ಮಾಲತಮ್ಮನವರು ನಾಟಕದಲ್ಲಿ ಗಂಡನನ್ನು ಬಿಟ್ಟು ಚೆನ್ನಮಲ್ಲಿಕಾರ್ಜುನನನ್ನು ಅರಸುತ್ತಾ ಹೋಗುವ ಅಕ್ಕಮಹಾದೇವಿ ಪಾತ್ರವನ್ನು ಅಭಿನಯಿಸಿದರು.

ಒಂದರ್ಥದಲ್ಲಿ ಗಂಡನನ್ನು ಬಿಟ್ಟು ಅವರ ಬದುಕಿನ ಉಸಿರಾದ ರಂಗಭೂಮಿಯನ್ನು ಅರಸುತ್ತಾ ನಡೆದುಬಿಟ್ಟಿದ್ದರು. ಬದುಕಿನ ಅಭಿವ್ಯಕ್ತಿ ನಾಟಕದ ಅಭಿವ್ಯಕ್ತಿ ಎರಡೂ ಸಮಾನಾಂತರವಾಗಿರುತ್ತವೆ. ಮಾಲತಮ್ಮನವರು ನಾಟಕವೇ ಬೇರೆ, ಬದುಕೇ ಬೇರೆ ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಸ್ವಂತ ಬದುಕಿನ ಯಾವ ನೋವೂ ರಂಗದ ಮೇಲೆ ಬರಬಾರದು ಎಂದು ನಿಖರವಾಗಿ ಹೇಳುತ್ತಾರೆ. ಆದರೆ ಎಷ್ಟೋ ಸಲ ಬದುಕಿನ ಭಾವವಲಯದ ನೆನಪುಗಳು ಘಟನೆಗಳಾಗಿ ಅಭಿನಯಕ್ಕೆ ಸಹಾಯ ಮಾಡುವುದಿಲ್ಲವಾದರೂ ಭಾವನೆಗಳನ್ನು ಅನುಭವಿಸಿದ ಪ್ರಕ್ರಿಯೆಗಳು ಅಭಿನಯಕ್ಕೆ ಖಂಡಿತವಾಗಿಯೂ ಸಹಾಯವಾಗುತ್ತವೆ. ಕೆಲವರು ಅದನ್ನು ಪ್ರಜ್ಞಾಪೂರ್ವಕವಾಗಿ ಪ್ರಯೋಗಕ್ಕೆ ಒಡ್ಡಿಕೊಳ್ಳಬಹುದು. ಆದರೆ ಮತ್ತೆ ಕೆಲವರ ಸುಪ್ತಮನಸ್ಸಿನ ಭಾವವಲಯ ತನ್ನ ಪಾಡಿಗೆ ಅದರ ಕೆಲಸವನ್ನು ನಿರ್ವಹಿಸುತ್ತದೆ.

ರಂಗಭೂಮಿ ನಟಿಯರು ನಡೆದು ಬಂದಿರುವ ಹಾದಿ ಹೂವಿನ ಹಾಸಿಗೆಯಾಗಿ ಎಂದೂ ಇರಲಿಲ್ಲ. ಪ್ರತಿಯೊಬ್ಬ ನಟಿಯ ಜೀವನದಲ್ಲೂ ಅವಳು ಸ್ತ್ರೀ ಎಂಬ ಕಾರಣಕ್ಕಾಗಿಯೇ ಬಹಳಷ್ಟು ತೊಂದರೆಗಳನ್ನು ಎದುರಿಸಿರುತ್ತಾಳೆ. ಸಮಾಜದಿಂದ ಬಹಿಷ್ಕೃತಗೊಂಡ ಆಕೆಗೆ ಕುಟುಂಬದವರು, ಜೊತೆಯಲ್ಲಿ ಕೆಲಸ ಮಾಡುವವರು ನಿರುಮ್ಮಳ ಉಸಿರಾಡುವಂತಹ ಆವರಣ ಸೃಷ್ಟಿಸಿಕೊಡದಿದ್ದರೆ ಹೇಗೆ ಬದುಕಿಯಾಳು? ಇನ್ನು ಆಕೆಯ ಸಾಧನೆಗಳ ಬಗ್ಗೆ ಅವರುಗಳು ನಟಿಸಿದ ನಾಟಕಗಳ ಪಟ್ಟಿಗಳು ಮತ್ತು ಅವರುಗಳು ಅದ್ಭುತವಾಗಿ ನಟಸುತ್ತಿದ್ದುದರ ಬಗ್ಗೆ ಕೆಲವು ಮಾತುಗಳ ವಿಮರ್ಶೆ ಸಿಗುತ್ತದೆಯೇ ಹೊರತು ಅವರ ಸಾಧನೆಯ ಬಗ್ಗೆ ವಿಶದವಾದ ಮಾಹಿತಿ ಸಿಗುವುದಿಲ್ಲ. ಆ ಸಂದರ್ಭದಲ್ಲಿ ಎದುರಿಸಿದ ಸವಾಲುಗಳ ಬಗ್ಗೆ, ಅವುಗಳನ್ನು ದಾಟಿ ಬಂದ ಬಗೆಯ ಬಗ್ಗೆ, ಅವರು ಪಾತ್ರಗಳನ್ನು ಕಟ್ಟುವಾಗ ನಡೆಸಿಕೊಳ್ಳುತ್ತಿದ್ದ ಸಿದ್ಧತೆಗಳ

ಬಗ್ಗೆ, ತಮ್ಮ ಸಹನಟರ ಸಹಕಾರ, ಧೋರಣೆ, ಅಸಹಕಾರಗಳ ಬಗ್ಗೆ ಎಲ್ಲೂ ನಿಖರವಾಗಿ ಮಾಹಿತಿ ಸಿಗುವುದಿಲ್ಲ. ಮತ್ತು ತಮ್ಮನ್ನು ನಡೆಸಿಕೊಳ್ಳುತ್ತಿದ್ದ ರೀತಿಯ ಬಗ್ಗೆಯೂ ಯಾರೂ ಬಹಿರಂಗವಾಗಿ ಎಲ್ಲೂ ಮಾತಾಡಿಲ್ಲ. ಎಷ್ಟೋ ಸತ್ಯಗಳನ್ನು ತಮ್ಮೊಳಗೇ ಬಚ್ಚಿಟ್ಟುಕೊಂಡು ಇಹಲೋಕದ ವ್ಯವಹಾರಗಳನ್ನು ಮುಗಿಸಿ ಹೊರಟುಬಿಟ್ಟಿದ್ದಾರೆ. ಈಗ ಉಳಿದಿರುವ ಕೆಲವರಾದರೂ ಆಗೊಮ್ಮೆ ಈಗೊಮ್ಮೆ ಕೆಲವು ಸತ್ಯಗಳನ್ನು ಬಿಟ್ಟು ಕೊಡುತ್ತಾರೆಯೇ ಹೊರತು ಒಟ್ಟಾರೆಯಾಗಿ ತಾವು ತುಂಬಾ ಅದ್ಭುತವಾದ ದಿನಗಳನ್ನು ಕಳೆದೆವೆಂದೇ ಹೇಳುತ್ತಾರೆ. ಅದು ಸತ್ಯವಾಗಿದ್ದರೆ ನಮಗೂ ಸಂತೋಷವೇ. ಆದರೆ ಅದನ್ನು ಮೀರಿದ ಸತ್ಯವೇನಾದರೂ ಇದ್ದರೆ ಅದು ನಂತರದ ತಲೆಮಾರಿನ ಕಲಾವಿದೆಯರಿಗೆ ದಕ್ಕಲಿ ಎಂಬ ಆಶಯವಷ್ಟೆ. ಮಳವಳ್ಳಿ ಸುಂದರಮ್ಮ, ಯಲ್ಲೂಬಾಯಿ, ಜಿ. ಸುಂದ್ರಮ್ಮ, ಗಂಗೂಬಾಯಿ ಗುಳೇದಗುಡ್ಡ, ಸ್ವರ್ಣಮ್ಮ, ಮಾಲತಮ್ಮ, ಬಿ. ಜಯಮ್ಮ, ರಂಗನಾಯಕಮ್ಮ, ಅಶ್ವತ್ಥಮ್ಮ, ಜಿ.ವಿ. ಶಾರದಾ, ಗೋಹರ್‌ಜಾನ್, ಅಮೀರಜಾನ್, ಕಾಶೀಬಾಯಿ ನಲವತವಾಡ, ಬ್ಯಾಡಗಿ ಸಾವಿತ್ರಮ್ಮ, ಜುಬೇದಾ ಸವಣೂರು, ಮುರಗೋಡ ರೇಣುಕಾ, ನಾಗರತ್ನಮ್ಮ, ಚಿಂದೋಡಿ ಲೀಲಾ ಮುಂತಾದ ದೊಡ್ಡ ಕಲಾವಿದೆಯರ ಪಟ್ಟಿಯೇ ನಮ್ಮ ಮುಂದಿದೆ. ನಾಟಕದ ಹೆಣ್ಣುಗಳೆಂದರೆ ಮೂಗು ಮುರಿಯುತ್ತಿದ್ದಂಥ ಪರಿಸ್ಥಿತಿಯಲ್ಲೂ ಸಹ ರಂಗಭೂಮಿಯ ಹಿರಿಮೆಯನ್ನು ಉಳಿಸಿ, ತಮ್ಮ ಸುಸಂಸ್ಕೃತ ಹಾಗೂ ಸಭ್ಯ ನಡೆನುಡಿಗಳಿಂದ, ಸಂಗೀತದಲ್ಲಿನ ತಮ್ಮ ಪ್ರೌಢಿಮೆಯಿಂದ ಹಾಗೂ ಅಭಿನಯದ ವೈಖರಿಯಿಂದ ತಮ್ಮದೇ ಆದ ಅಸ್ತಿತ್ವವನ್ನು ಮೂಡಿಸಿದ್ದಾರೆ.

ಇವರ ಸಾಧನೆ ಎಲ್ಲಿಯವರೆಗೆ ಹೋಗಿತ್ತೆಂದರೆ ಸ್ತ್ರೀಯರು ಅಭಿನಯಿಸಿದರೆ ಪ್ರೇಕ್ಷಕರಿಗೆ ಆಕರ್ಷಣೆ ಹಾಗೂ ವೃತ್ತಿ ಕಂಪನಿಗಳ ಏಳಿಗೆ ಎಂಬ ಅಭಿಪ್ರಾಯ ಬಲವಾಗಿ ಮೂಡತೊಡಗಿತು. ನಂತರ ಹೆಂಗಸರನ್ನು ಸೇರಿಸಿಕೊಂಡು ಅವರಿಗೆ ಅಭಿನಯ ಕಲೆಯಲ್ಲಿ ಶಿಕ್ಷಣ ನೀಡಿ ಮುಖ್ಯ ಪಾತ್ರಗಳಿಗೆ ಸಿದ್ಧ ಮಾಡುತ್ತಿದ್ದರಲ್ಲದೆ, ಮತ್ತೊಂದು ಕಡೆ ಸ್ತ್ರೀಯರೇ ನಾಟಕಮಂಡಲಿಗಳನ್ನು ಕಟ್ಟಿ, ತಾವೇ ಗಂಡು ಹಾಗೂ ಹೆಣ್ಣಿನ ಪಾತ್ರಗಳನ್ನು ವಹಿಸುವ ಪದ್ಧತಿ ಕೂಡ ಪ್ರಾರಂಭವಾಯಿತು. ಸ್ತ್ರೀ ಪಾತ್ರಗಳನ್ನು ನಟಿಸುತ್ತಿದ್ದ ಪುರುಷರ ಪಟ್ಟಿಯಂತೆಯೇ ಪುರುಷ ಪಾತ್ರಗಳನ್ನು ನಟಿಸುವ ಸ್ತ್ರೀಯರ ಪಟ್ಟಿಯೂ ಇದೆ. ಬಚ್ಚಾಸಾನಿ, ಪಾಪಾಸಾನಿ, ನಂಜಾಸಾನಿ, ಆರ್. ನಾಗರತ್ನಮ್ಮ ಇವರುಗಳು ಪುರುಷಪಾತ್ರದಲ್ಲಿ ಪ್ರಯೋಗಗಳನ್ನು ನಡೆಸಿದ್ದಾರೆ.

ಕೊಣ್ಣೂರು ಕಂಪನಿಯ ಯಲ್ಲೂಬಾಯಿ ಬಿಜ್ಜಳನ ಪಾತ್ರದಲ್ಲಿ ವೀರಾಸನದಲ್ಲಿ ಕುಳಿತುಕೊಳ್ಳುತ್ತಿದ್ದ ಭಂಗಿ ಕುತೂಹಲಕಾರಿಯಾಗಿರುತ್ತಿತ್ತು ಎಂದು ಶಿವಮೂರ್ತಿ ಸ್ವಾಮಿಗಳು ತಮ್ಮ ದಿನಚರಿಯಲ್ಲಿ ಬರೆದಿಟ್ಟಿದ್ದಾರಂತೆ. ನಟರುಗಳು ಇದ್ದಾಗಿಯೂ ಸ್ತ್ರೀಯೊಬ್ಬಳಿಂದ ಮುಖ್ಯ ಪುರುಷಪಾತ್ರವನ್ನು ಮಾಡಿಸುತ್ತಾರೆ ಎನ್ನುವುದಾದರೆ ಆಕೆಯ ಸಾಮರ್ಥ್ಯ ಮತ್ತು ಪ್ರೇಕ್ಷಕರ ಒಪ್ಪಿಗೆ ಎರಡರ ಮೇಲೂ ಬೆಳಕು ಚೆಲ್ಲುತ್ತದೆ.

ನಟಿಯರು ಕೇವಲ ನಟನೆಯ ಜವಾಬ್ದಾರಿಯನ್ನು ಹೊರುತ್ತಿದ್ದವರು ಇಡೀ ತಂಡವನ್ನು ಕಟ್ಟುವ, ಮುನ್ನಡೆಸುವ ಜವಾಬ್ದಾರಿಯನ್ನು ಸಂತೋಷದಿಂದ ಬರಮಾಡಿಕೊಂಡರು. ಊರು ಊರು ಅಲೆದು ನಾಟಕಗಳನ್ನು ಅಭಿನಯಿಸಿ ಕಷ್ಟ ನಷ್ಟಗಳನ್ನು ಎದುರಿಸುತ್ತಾ ನಾಟಕದ ಬಗ್ಗೆ ಅವರಿಗಿದ್ದ ಅಭಿಮಾನ, ತುಡಿತ, ಜನರ ಮುಂದಿಡಬೇಕೆಂಬ ಉತ್ಸಾಹ, ಹೋದ ಕಡೆಗಳಲ್ಲಿ ಸ್ಥಳೀಯ ಅಧಿಕಾರಿಗಳಿಂದ ಲೈಸೆನ್ಸ್ ಪಡೆದು ನಾಟಕಗಳನ್ನು ಪ್ರದರ್ಶಿಸುವ ಜವಾಬ್ದಾರಿ ಮತ್ತು ಆಗ ಅವರು ಎದುರಿಸುತ್ತಿದ್ದ ಕಷ್ಟಗಳನ್ನು ಪರಿಗಣಿಸಿದರೆ ಸ್ತ್ರೀ ನಾಟಕ ಕಂಪನಿಗಳನ್ನು ಸ್ಥಾಪಿಸಿದ ಮಹಿಳೆಯರ ಧೈರ್ಯ, ಹಟ ಮತ್ತು ಸಾಮರ್ಥ್ಯದ ಅರಿವಾಗುತ್ತದೆ. ನಿರಂತರವಾಗಿ ಸಮಾಜವನ್ನು ಎದುರಿಸುತ್ತಾ ಬಂದ ಅವರು ರಂಗಭೂಮಿಗಾಗಿ ಏನು ಬೇಕಾದರೂ ಮಾಡುವಂಥ ಸ್ಥಿತಿಯನ್ನು ತಲುಪಿದ್ದುದು ಕಂಡುಬರುತ್ತದೆ.

ಇದೇ ಸಂದರ್ಭದಲ್ಲಿ ಪಕ್ಕದ ರಾಜ್ಯವಾದ ಆಂಧ್ರಪ್ರದೇಶದಲ್ಲಿರುವ ಸುರಭಿ ನಾಟಕ ತಂಡದ ಬಗ್ಗೆ ಹೇಳಲೇಬೇಕು. ಈ ನಾಟಕ ತಂಡ ಗುಬ್ಬಿ ಕಂಪನಿಯಷ್ಟೇ ಹಳೆಯದಾದ ನಾಟಕಮಂಡಲಿ. ಅಲ್ಲಿ ಇರುವ ಎಲ್ಲರೂ ಒಂದೇ ಕುಟುಂಬದವರು. ವನರಸ ಗೋವಿಂದರಾವ್ ಸುರಭಿಯ ಸಂಸ್ಥಾಪಕ. ಈತ ಸುಬ್ಬಮ್ಮ ಎಂಬಾಕೆಯನ್ನು ಮದುವೆಯಾದವರು, ತಂಡದಲ್ಲಿ ಮತ್ತೊಬ್ಬ ನಟಿಯ ಕೊರತೆ ಎದುರಾದಾಗ ಹೆಂಡತಿಯ ತಂಗಿ ಲಕ್ಷ್ಮಮ್ಮನನ್ನು ಮದುವೆ ಮಾಡಿಕೊಂಡರು. 'ಮದುವೆ' ಎಂಬುದು ಅವತ್ತಿನ ದಿವಸಗಳಲ್ಲಿ ಕೆಲಸಕ್ಕೆ ಮತ್ತು ಬದುಕಿಗೆ ಕಾಂಟ್ರ್ಯಾಕ್ಟ್ ಆಗಿ ಪರಿವರ್ತಿತಗೊಂಡಿರುವುದು ಕಾಣಿಸುತ್ತದೆ. ಹಾಗೆಯೇ ತನ್ನೆರಡು ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಡುವಾಗ ವರದಕ್ಷಿಣೆಯೆಂದು ಕೊಟ್ಟಿದ್ದು ಮೇಕಪ್ ಕಿಟ್ ಮತ್ತು ನಾಟಕದ ಪರಿಕರಗಳನ್ನು. ಅಂದರೆ ಇಲ್ಲಿಯ ಹೆಣ್ಣುಮಕ್ಕಳು ಮದುವೆಯಾದ ನಂತರ ಗಂಡನ ಮನೆಗೆ ನಡೆದಿಲ್ಲ. ಬದಲಾಗಿ ಗಂಡಂದಿರೇ ಸುರಭಿಯ ಬಳಗಕ್ಕೆ ಸೇರಿಕೊಂಡಿದ್ದಾರೆ. ಅಥವಾ ಬಳಗದ ಒಳಗೇ ಗಂಡಂದಿರನ್ನು ಹುಡುಕಿ ಮದುವೆ ಮಾಡಿದ್ದಾರೆ. ನಾಟಕಕ್ಕೆ ಬೇರೆ ಹೆಣ್ಣುಮಕ್ಕಳು

## ಹಂಬಲ



ಮನದ ತುಂಬ ನಿರೀಕ್ಷೆ
ಜೊತೆಯಾಗಿ ಗೂಡುಕಟ್ಟುವ ತವಕ
ತತ್ತಿ ಮರಿಮಾಡುವ ಕಾಯಕ
ಗುಟುಕು ನೀಡುವ ಸಂತಸ
ರೆಕ್ಕೆ ಬಿಚ್ಚುವ ಕುಪ್ಪಳಿಸುವ ಪಾಠ
ಅಗಲಿಕೆಯ ನೋವು ಯಾತನೆ

ಸಂಗಾತಿಯ ಮರ್ಜಿ ಮೌನ ಹಾರಾಟ
ರೆಕ್ಕೆ ಬೀಸಿ ಬೀಸಿ ಸುಸ್ತು ಸಂಕಟ
ಸಾಂತ್ವನದ ಹಂಬಲ ಕಾತರ
ತಗ್ಗು ದಿಣ್ಣೆಗಳ ದಾರಿ ನಡೆದಷ್ಟೂ ದೂರ
ಕೊನೆಯರಿಯದ ತಳಮಳ ಬೇಸರ
ತಂಬೆಲರ ಬಯಕೆ ಬಿಸಿಯುಸಿರು

ಲೋಕದೃಷ್ಟಿಗೆ ಹಾರುವ ಗಮ್ಮತ್ತು
ರೆಕ್ಕೆಗೆಲ್ಲಿಯದು ಅಷ್ಟೊಂದು ತಾಕತ್ತು
ಒಳಗು ಹೊರಗು ಸಮಾನಾಂತರ ರೇಖೆ
ಸಂಧಿಸಲಾರದ ನೋವು ನಿರಾಸೆ
ಕಣ್ಣಲ್ಲಿ ನೂರು ಪ್ರಶ್ನೆ

■ *ಚಂದ್ರಮತಿ ಸೋಂದಾ*

ಬರುತ್ತಿರಲಿಲ್ಲವಾದ್ದರಿಂದ ಇಲ್ಲಿಯ ಹೆಣ್ಣು ಮಕ್ಕಳ್ಯಾರೂ ಹೊರಗೆ ಹೋಗಿಲ್ಲ. ಒಳಗೆ ಬಂದ ಸೊಸೆಯರಲ್ಲ ನಟಿಯರಾಗಿಜಿಟ್ಟಿದ್ದಾರೆ. ಇಲ್ಲಿನ ನಟಿಯರಿಗೆ ರಂಗದ ಮೇಲಿನ ಬದುಕು ಮತ್ತು ಹಿಂದಿನ ಬದುಕಿಗೆ ಬಹಳ ವ್ಯತ್ಯಾಸವೇನಿಲ್ಲ. ಅರಮನೆ, ಸಿಂಹಾಸನ, ಕಿರೀಟ, ಆಭರಣ, ವಸ್ತ್ರಗಳು, ಬಣ್ಣಗಳು, ಬೆಳಕು, ಸಂಗೀತ ಎಲ್ಲವೂ ಅವರ ಬದುಕಿನೊಳಗೇ ಆವರಿಸಿಕೊಂಡಿವೆ. ಮತ್ತು ಅವರು ಅಭಿನಯಿಸುವ ಪಾತ್ರಗಳೆಲ್ಲವೂ ಹೆಚ್ಚು ಕಡಿಮೆ ಅದೇ ಏಕತಾನತೆಯ ಪಾತ್ರಗಳು. ಅವರಿಗೆ ಸವಾಲೆನಿಸುವ ಗಂಡು ಪಾತ್ರಗಳನ್ನು ಒಮ್ಮೊಮ್ಮೆ ಮಾಡುತ್ತಾರೆ. ಅವರು ನಿತ್ಯದ ಮತ್ತು ರಂಗದ ಮೇಲಿನ ಬದುಕೆರಡನ್ನು ಏಕಕಾಲದಲ್ಲಿ ಸಮರ್ಥವಾಗಿ ನಿರ್ವಹಿಸುತ್ತಾರೆ. ತರಕಾರಿ ಕತ್ತರಿಸುತ್ತಾ, ಅಡಿಗೆ ಮಾಡುತ್ತಾ, ತಮ್ಮ ಸರದಿ ಬಂದಾಗ ಹೋಗಿ ರಂಗದ ಮೇಲೆ ಅಭಿನಯಿಸಿ ಮತ್ತೆ ವಾಪಸ್ಸಾಗುವುದು ಅವರಿಗೆ ಸಹಜ ಕ್ರಿಯೆ. ನಿತ್ಯದ ಬದುಕಿನಿಂದ ರಂಗಕ್ಕೆ entry, exit ಆಗುವುದೇ ಅವರ ಬದುಕು. ಹೀಗಾಗಿ ಅವರ ವೈಯಕ್ತಿಕ ಬದುಕು, ರಂಗದ ಮೇಲಿನ ಬದುಕು ಮತ್ತು ಸುರಭಿ ಎಂಬ ತಾವೇ ಸೃಷ್ಟಿಸಿಕೊಂಡ ಸಮಾಜ ಎಲ್ಲವೂ ಒಂದಲ್ಲೊಂದು ಕಡೆ ಮಿಳಿತವಾಗೇ ಇದೆ. ಈ ಅವಿಭಕ್ತ ರಂಗಕುಟುಂಬ ಇವತ್ತಿಗೂ ಒಂದು ವಿಸ್ಮಯ!

ಇವತ್ತಿನ ಸುರಭಿಯ ಹೆಣ್ಣುಮಕ್ಕಳು ಹೊರಗಡೆ ಪ್ರಪಂಚದತ್ತ ಕಣ್ಣು ಹಾಯಿಸುತ್ತಿದ್ದಾರೆ. ವಿದ್ಯಾಭ್ಯಾಸಕ್ಕೆಂದು ಹೊರಗೆ ಹೋಗುತ್ತಾರೆ. ರಾತ್ರಿ ನಾಟಕ ಪ್ರದರ್ಶನವನ್ನು ನೀಡುತ್ತಾರೆ. ಇದರಿಂದಾಗಿ ಅವರಿಗೆ ಕೆಲವು ಸಮಸ್ಯೆಗಳು ಎದುರಾಗಿವೆ. ಗಂಡುಹುಡುಗರು ರಸ್ತೆಯಲ್ಲಿ ಇವರು ನಡೆದಾಡುವಾಗ ಅವರು ನಟಿಸುವ ಪಾತ್ರಗಳ ಹೆಸರಿನಲ್ಲಿ ಜೋರಾಗಿ ಕೂಗುವುದು, ಅಣಕಿಸುವುದು ಮಾಡುತ್ತಾರೆ. ಹಾಗೆಯೇ ರಂಗದ ಮೇಲೆ ನಟಿಸುತ್ತಿದ್ದಾಗ ಪ್ರೇಕ್ಷಾಂಗಣದಿಂದ ಅವರ ನಿಜ ಹೆಸರುಗಳನ್ನು ಕೂಗಿ ಗಲಿಬಿಲಿಗೊಳಿಸುತ್ತಾರೆ.

ಮೊದಲಿನಿಂದಲೂ ಹೆಚ್ಚಾಗಿ ಪುರುಷಕೇಂದ್ರಿತ ನಾಟಕಗಳನ್ನೇ ಅಭಿನಯಿಸುತ್ತಿದ್ದ ಸುರಭಿ ತಂಡ ಮೊದಲ ಬಾರಿಗೆ 1997 ಮತ್ತು 1998ರಲ್ಲಿ ಆಧುನಿಕ ರಂಗಭೂಮಿಯ ಹೆಸರಾಂತ ನಿರ್ದೇಶಕರಾದ ಶ್ರೀ ಬಿ.ವಿ. ಕಾರಂತರ ನಿರ್ದೇಶನದಲ್ಲಿ ಮೂರು ಕೇಂದ್ರಿತ ನಾಟಕಗಳಾದ 'ಚಂಡಿಪ್ರಿಯ', 'ಬಸ್ತಿದೇವತಾ ಯಾಡಮ್ಮ' ಮತ್ತು ಬ್ರೆಕ್ಟ್‌ನ 'ಸೆಜುವಾನ್ ನಗರದ ಸಾಧ್ವಿ' ನಾಟಕಗಳನ್ನು ಪ್ರಯೋಗ ಮಾಡಿತು. ಹೆಣ್ಣುಮಕ್ಕಳು ಮುಖ್ಯ ಪಾತ್ರಗಳಲ್ಲಿ ಅಭಿನಯಿಸಿದರು. ಈ ನಾಟಕಗಳು ಸುರಭಿ ಶೈಲಿಯಲ್ಲಿಯೇ ನಿರ್ಮಾಣಗೊಂಡರೂ ಅಲ್ಲಿನ ವಸ್ತು ಮತ್ತು ನಿರ್ದೇಶನ ಆ ಹೆಣ್ಣುಮಕ್ಕಳಿಗೆ ಹೊಸ ಅನುಭವಕ್ಕೆ, ಹೊಸ ದೃಷ್ಟಿಕೋನಗಳಿಗೆ ಕಣ್ದೆರಸಿದ ಅನುಭವ ನೀಡಿತ್ತು.

ಹೀಗೆ ರಂಗಜೀವನವನ್ನು ಸಾಗಿಸಿಕೊಂಡು ಬಂದ ಹೆಂಗಸರು ಪುರುಷರ ಆಲೋಚನೆಯ ಸ್ತ್ರೀಯರಂತೆಯೇ ಸುಮಾರು ವರ್ಷಗಳ ಕಾಲ ಕಾಣಿಸಿಕೊಂಡಿದ್ದಾರೆ. ಕೆಲವರು ಕೇವಲ ಅದೊಂದು ಕೆಲಸ ವೆಂಬಂತೆ ನಿರ್ವಹಿಸಿಯೂ ಇದ್ದಾರೆ. ಅದೇ ಸೀತೆ, ಸಾವಿತ್ರಿ, ದ್ರೌಪದಿ, ಕೈಕೇಯಿ ಸುಭದ್ರ, ರಾಧೆ. ಕುಂತಿ, ಶಕುಂತಲ, ಅಹಲ್ಯೆ, ಮೇನಕೆ ಅಥವಾ ಹೇಮರೆಡ್ಡಿ ಮಲ್ಲಮ್ಮ, ಕಿತ್ತೂರು ಚೆನ್ನಮ್ಮ, ಅಕ್ಕಮಹಾದೇವಿ ಅಥವಾ ಹಳ್ಳಿಹುಡುಗಿ, ಬಜಾರಿ ಹುಡುಗಿ, ಮಲಮಗಳು, ಮಲತಾಯಿ ಇಂಥವೇ ಪಾತ್ರಗಳು, ಎಲ್ಲ ಕಂಪನಿಗಳಲ್ಲೂ ಹೆಂಗಸರು ಅಭಿನಯಿಸಿದ್ದಾರೆ. ಈ ಎಲ್ಲ ಪಾತ್ರಗಳು ರಚಿತವಾಗಿದ್ದುದು ಪುರುಷರಿಂದಲೇ. ಕೆಲವರು ಪಾತ್ರಗಳನ್ನು ಕಟ್ಟುವಾಗ ಆಕ್ಷೇಪವೆತ್ತಿದ್ದಾರೆ. ತಮಗೆ ಅನಿಸುವಂತೆ ಸಿಕ್ಕಂಥ ಅವರಣಗಳಲ್ಲಿ ಅಭಿವ್ಯಕ್ತಿಸುವ ಪ್ರಯತ್ನ ಮಾಡಿದ್ದಾರೆ. ಸ್ತ್ರೀಯರೆಂದರೆ ಕೇವಲ ರಂಗದ ಮೇಲೆ ನಡೆದಾಡುವ ಗೊಂಬೆಗಳಷ್ಟೇ ಅಲ್ಲ ಎಂಬಂತಹ ಧ್ವನಿಗಳನ್ನು ತೆಗೆದಿದ್ದಾರೆ. ರಂಗಭೂಮಿ ಇಂತಹ ಧ್ವನಿಗಳನ್ನು ಬಹಳ ಗಂಭೀರವಾಗಿ ತೆಗೆದುಕೊಂಡಿಲ್ಲ. ಗಮನಿಸಿಯೂ ಗಮನಿಸದ ಹಾಗೆ ಇರುವ ಜಾಣತನ ಮೆರೆದಿದೆ. ಇಷ್ಟಾದರೂ ಅವುಗಳನ್ನು ಸಂಪೂರ್ಣವಾಗಿ ಪಕ್ಕಕ್ಕೆ ಸರಿಸಲಾಗಿಲ್ಲ. ಹಾಗಾಗಿ ಬದಲಾದ ಯೋಚನೆಗಳೊಂದಿಗೆ ಬದಲಾದ ರಂಗಭೂಮಿಯ ಪರಿಕಲ್ಪನೆಯೊಂದಿಗೆ ಆಯಾ ಕಾಲಘಟ್ಟದಲ್ಲಿ ಹೊಸ ಹೊಸ ವಸ್ತುಗಳೊಂದಿಗೆ ರಂಗಭೂಮಿ ತೆರೆದುಕೊಳ್ಳುವ ಪ್ರಯತ್ನ ಮಾಡಿದೆ. ಸುಶಿಕ್ಷಿತ ಮಹಿಳೆಯರು ಕಡಿಮೆ ಸಂಖ್ಯೆಯಲ್ಲಾದರೂ ರಂಗಭೂಮಿಯನ್ನು ತಮ್ಮ ಅಭಿವ್ಯಕ್ತಿಗೆ ಆರಿಸಿಕೊಳ್ಳಲು ಹಾತೊರೆದಿದ್ದಾರೆ. ವೃತ್ತಿಯಾಗಿ ಅಲ್ಲವಾದರೂ ಹವ್ಯಾಸವೆಂಬಂತೆ ಆರಿಸಿಕೊಂಡಿದ್ದಾರೆ. ಅವರೊಡನೆ ವೃತ್ತಿ ಕಂಪನಿಯ ಕೊನೆ ತಲೆಮಾರಿನ ಕೊಂಡಿಗಳನೇಕರು ಸೇರಿಕೊಂಡು ವಿಲಾಸೀ ಅಥವಾ ಹವ್ಯಾಸಿ ರಂಗಭೂಮಿಯಲ್ಲಿ ಕೆಲಸ ಮಾಡಲು ಪ್ರಾರಂಭಿಸಿದ್ದಾರೆ. ಆಧುನಿಕ ಚಿಂತನೆಯ ನಾಟಕಗಳು ಪ್ರಾರಂಭವಾಗಿದ್ದ ಸಂದರ್ಭದಲ್ಲಿ ಅವುಗಳ ಜೊತೆ ಗುರುತಿಸಿಕೊಳ್ಳುವ ಪ್ರಯತ್ನ ನಡೆಸಿದ್ದಾರೆ.

ಹೀಗೆ ರಂಗಭೂಮಿಯೆಡೆಗೆ ಬಂದ ಕಲಾವಿದೆಯರಲ್ಲನೇಕರು ನಾಟಕಕಾರನ, ನಿರ್ದೇಶಕನ ಅಥವಾ ನಟನ ಮನೆಯ ಹೆಣ್ಣುಮಕ್ಕಳಾಗಿರುತ್ತಿದ್ದರೇ ಹೊರತು ತಾವಾಗಿಯೇ ರಂಗಭೂಮಿಯತ್ತ ನಡೆದುಬಂಧವರಲ್ಲ. ರಂಗಭೂಮಿಯೆಡೆಗೆ ಬರುವ ಆಸೆ, ಸೆಳೆತ, ಆಸಕ್ತಿ ಎಲ್ಲ ಇದ್ದರೂ ಕೌಟುಂಬಿಕ ಒತ್ತಡಗಳು, ಸಮಾಜದ ಧೋರಣೆ ಅವರನ್ನು ಬಿಡುತ್ತಿರಲಿಲ್ಲ. ವೃತ್ತಿ ರಂಗಭೂಮಿಯ ಕಲಾವಿದೆಯರಿಗೆ ರಂಗಭೂಮಿ ದುಡಿಮೆಯಾಗಿತ್ತು. ಹಣ ಗಳಿಸಲೇಬೇಕಾದ ಅನಿವಾರ್ಯತೆ ಇದ್ದುದರಿಂದ ಎಲ್ಲ ಕಷ್ಟಗಳನ್ನು, ಸಾಮಾಜಿಕ ಅಸಮಾನತೆ, ಅವಮಾನಗಳನ್ನು ನುಂಗಿಕೊಂಡು ರಂಗಭೂಮಿಯಲ್ಲೇ ಉಳಿದರು. ಆದರೆ ಹವ್ಯಾಸಿ ರಂಗಭೂಮಿಯ ಕಲಾವಿದೆಯರಿಗೆ ಹಾಗಾಗಲಿಲ್ಲ. ರಂಗಭೂಮಿ ಕೇವಲ ಹವ್ಯಾಸವಾಗಿತ್ತೇ ವಿನಃ ಉದ್ಯಮವಲ್ಲ. ಅದರಿಂದಾಗಿ ವೈಯಕ್ತಿಕ ಬದುಕನ್ನು ಹೆಚ್ಚು ಕದಲದ ಹಾಗೆ ನೋಡಿಕೊಂಡರು. ಪಾತ್ರಗಳ ಆಯ್ಕೆಯಲ್ಲಿ, ಅವುಗಳ ಅಭಿವ್ಯಕ್ತಿಯಲ್ಲಿ, ತಾಲೀಮಿನ ರೀತಿನೀತಿಗಳಲ್ಲಿ ರಾಜಿ ಮಾಡಿಕೊಂಡರು. ಆದರೆ ಕೆಲವರು ಮನೆಯವರಿಗೆ ಹೇಳದೆ ಬೈಗುಳ-ಹೊಡೆತ ಸಹ ಸಹಿಸಿಕೊಂಡು ರಂಗವೇರಿದ್ದಾರೆ. ಇನ್ನೂ ಕೆಲವರು ರಾತ್ರಿ ತಡವಾಗಿ ಮನೆಗೆ ಹೋಗಿ ರಂಗಭೂಮಿಗೆ ಕೊನೆಯ ನಮಸ್ಕಾರ ಹಾಕಿದವರೂ ಇದ್ದಾರೆ. ಇಷ್ಟೆಲ್ಲ ತೊಡಕುಗಳಿದ್ದರೂ ಅದನ್ನು ದಾಟಿ ರಂಗಭೂಮಿಯಲ್ಲಿ ಉಳಿದವರು ಯಾಕಾಗಿ ಇವನ್ನೆಲ್ಲ ಮಾಡಿದರು ಎಂಬ ಪ್ರಶ್ನೆಗೆ ಅವರ ಅಂತರಂಗದ ಸೃಜನಶೀಲ ಮನಸ್ಸಿನ ತುಡಿತ ಎಂಬ ಉತ್ತರವಿದೆ. ಹವ್ಯಾಸಿ ರಂಗಭೂಮಿಯ ಪ್ರಾರಂಭದಲ್ಲಿ ಇದ್ದಂಥ ವಿಮಲಾ ರಂಗಾಚಾರ್, ಗೋದಾ ರಾಂಕುಮಾರ್, ಲಲಿತಾ ಶಿವರಾಂ ಉಭಯಕರ್, ಶಾರದಾರುದ್ರ, ಭಾರ್ಗವಿ ನಾರಾಯಣ್, ಚಂದ್ರ, ಸತ್ಯವತಿ, ಯಮುನಾಮೂರ್ತಿ, ವೈಶಾಲಿ, ರಾಮೇಶ್ವರಿವರ್ಮ, ಕೆ. ಶಾಂತ, ಅರುಂಧತಿರಾವ್, ಶಕುಂತಲಾಬಾಯಿ, ಪಟವಾರಿ ಭಗಿನಿಯರು, ಜೋರಾಪುರ ಭಗಿನಿಯರು, ಸರಳಾದೇವಿ ದೇಶಪಾಂಡೆ ಮೊದಲಾದವರಿಂದ ಹಿಡಿದು ಇವತ್ತಿನ ಅನೇಕರವರೆಗೂ ಗುರುತಿಸುತ್ತಾ ಹೋಗಬಹುದು.

ಇವರುಗಳ ಜೊತೆಯಲ್ಲಿ ವೃತ್ತಿ ಮತ್ತು ಹವ್ಯಾಸಿಗಳ ಕೊಂಡಿಯಂತಿರುವ ಉಮಾಶ್ರೀ, ಜಯಶ್ರೀ, ಗಿರಿಜಾ ಮುಂತಾದವರು ವೃತ್ತಿ ರಂಗಭೂಮಿಯ ವೃತ್ತಿಪರತೆಯೊಂದಿಗೆ ಹವ್ಯಾಸಿ ರಂಗಭೂಮಿಯ ಹೊಸ ಆಲೋಚನೆಗಳನ್ನೂ ಮೈಗೂಡಿಸಿಕೊಂಡು ವಿಶೇಷವಾದ ಸ್ಥಾನವನ್ನು ಪಡೆದಿದ್ದಾರೆ.

ಹವ್ಯಾಸಿಗಳು ಶ್ರೀರಂಗ, ಟಿ.ಪಿ. ಕೈಲಾಸಂ, ಪರ್ವತವಾಣಿ ಮುಂತಾದವರ ನಾಟಕಗಳನ್ನು ಆರಿಸಿಕೊಳ್ಳುತ್ತಿದ್ದರು. ಅವುಗಳ ಪ್ರದರ್ಶನಗಳು ಕೇವಲ ಬೆರಳಣಿಕೆಯಷ್ಟು ಸಲ ಮಾತ್ರ ಆಗುತ್ತಿದ್ದವು. ಬೇರೆ ಬೇರೆ ಕಾರಣಗಳ ಜೊತೆ ಸ್ತ್ರೀಪಾತ್ರಗಳನ್ನು ಅಭಿನಯಿಸುವ ಕಲಾವಿದೆಯರು ಮರು ಪ್ರದರ್ಶನಗಳಿಗೆ ಬಾರದೆ ಪ್ರದರ್ಶನಗಳು ಮುಕ್ತಾಯ ಹಾಡಿವೆ. ಅದಕ್ಕಾಗಿಯೇ ಹವ್ಯಾಸಿ ರಂಗಭೂಮಿಯ ನಾಟಕಕಾರರು ಸ್ತ್ರೀಯರ ಇರುವಿಕೆ, ಇಲ್ಲದಿರುವಿಕೆಗಳನ್ನು ಗಮನ ದಲ್ಲಿಟ್ಟುಕೊಂಡೇ ನಾಟಕಗಳನ್ನು ರಚಿಸುವಂತಾದರು. ಸ್ತ್ರೀಪಾತ್ರಗಳು ಇರುವುದಾದರೂ ಹೆಚ್ಚು ಪ್ರಾಶಸ್ತ್ಯ ಇಲ್ಲದಿರುವಂತಹ, ನಟಿಯೊಬ್ಬಳ ಅನುಪಸ್ಥಿತಿಯಲ್ಲೂ ನಾಟಕವನ್ನು ನಡೆಸಿಕೊಂಡು ಹೋಗಬಹು ದಾದಂತಹ ಅನುಕೂಲಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ನಾಟಕಗಳನ್ನು ರಚಿಸುತ್ತಿದ್ದರು. ಹೀಗಾಗಿ ರಚಿತವಾದ ಸ್ತ್ರೀ ಪಾತ್ರದ ಅಸ್ತಿತ್ವವೇ ನಾಟಕದೊಳಗೆ ಪ್ರಾಮುಖ್ಯತೆಯನ್ನು ಪಡೆಯದಿರುವಾಗ ಇನ್ನು ಆಕೆಯ ಅಭಿವ್ಯಕ್ತಿಯ ಪ್ರಶ್ನೆ ಎಲ್ಲಿಯದು? ಕಂಪನಿ ನಾಟಕಗಳಲ್ಲಿ ಸ್ತ್ರೀ ಪ್ರದರ್ಶನದ ಆಕರ್ಷಣೆ ಮತ್ತು ಕಂಪನಿಯ ಏಳಿಗೆಗೆ ಕಾರಣಳಾದ ಕಾರಣಕ್ಕೆ ಸ್ತ್ರೀಕೇಂದ್ರಿತ ನಾಟಕಗಳು ದೊರೆತರೂ, ಎಲ್ಲವೂ ಪುರುಷಪ್ರಧಾನ ಸಮಾಜದ, ಪುರುಷ ದೃಷ್ಟಿಯಿಂದ ಕೂಡಿದ, ಪುರುಷ ಪ್ರಜ್ಞೆಯಿಂದ ರಚಿತವಾದ ಸ್ತ್ರೀಪಾತ್ರ ಗಳಾಗಿದ್ದವು. ಹವ್ಯಾಸಿ ರಂಗಭೂಮಿಯ ನಾಟಕಗಳಲ್ಲಿ ಸ್ತ್ರೀಪಾತ್ರಗಳು ಆಟಕ್ಕುಂಟು ಲೆಕ್ಕಕ್ಕಿಲ್ಲ ದಂತಾಗಿಬಿಟ್ಟಿದ್ದವು. ನಿಜಜೀವನದಲ್ಲಿ ಸ್ತ್ರೀ ತಾಯಿಯಾಗಿ, ಹೆಂಡತಿಯಾಗಿ ಪಾತ್ರ ನಿರ್ವಹಿಸುವುದು ಅನಿವಾರ್ಯವಾಗುವಂತೆ, ಜೀವನದ ಪ್ರತಿಬಿಂಬವೆಂದು ಹೇಳುವ ನಾಟಕ ಗಳಲ್ಲಿ ಸ್ತ್ರೀ ಪಾತ್ರಗಳು ಕಡ್ಡಾಯ ಅಗತ್ಯವಾಗಿ ಕಾಣದಿರುವುದು, ಸ್ತ್ರೀ ಸಂಬಂಧಿ ಆಲೋಚನೆಯ ಕೊರತೆ ಕಾಣಿಸುವುದು, ಸ್ತ್ರೀ ಚಿತ್ರಣ ಅನಿವಾರ್ಯವಾಗದೇ ಹೋದದ್ದು ಒಂದು ಚೋದ್ಯವೆಂದೇ ಹೇಳಬೇಕು.[8]



ಅವತ್ತಿಗೆ, ಹೆಣ್ಣುಮಕ್ಕಳು ರಂಗದ ಮೇಲೇರಿ ಅಭಿನಯ ನೀಡುವುದೇ ದೊಡ್ಡ ಬದಲಾವಣೆ ಎಂಬಂತೆ, ಕ್ರಾಂತಿಯೆಂಬಂತೆ ತೋರುತ್ತಿತ್ತು. ಸಿಕ್ಕ ಪಾತ್ರಗಳನ್ನು ಯಾವ ತೊಂದರೆಯಿಲ್ಲದೇ ಅಭಿನಯಿಸಿ ಪ್ರದರ್ಶನ ನೀಡಿ ಮನೆಗೆ ತೆರಳುವುದೇ ಸಮಾಧಾನಕರ ಸಂಗತಿ ಆಗಿತ್ತು. ಹಾಗಾಗಿ ವಿದ್ಯಾವಂತ ಹೆಣ್ಣುಮಕ್ಕಳಾದರೂ ತಮಗೆ ಸಿಕ್ಕ ಪಾತ್ರಗಳನ್ನು ಸ್ತ್ರೀನೆಲೆಯಿಂದ ಅರ್ಥೈಸಿ, ವಿಮರ್ಶಿಸಿ ನಂತರ ಅಭಿವ್ಯಕ್ತಿಸುವ ಪ್ರಕ್ರಿಯೆಗೆ ವ್ಯವಧಾನವಿರಲಿಲ್ಲ. ತಾನಲ್ಲದ ಮತ್ತೊಂದು ಪಾತ್ರಕ್ಕೆ ಜಿಗಿಯುವ ಆನಂದವಿತ್ತು. ಹಾಗಾಗಿ ಆ ಕಾಲಘಟ್ಟದಲ್ಲಿಯೂ ನಾಟಕದೊಳಗಿನ ಪಾತ್ರಗಳ ಬಗೆಗೆ ಸುದೀರ್ಘ ಚರ್ಚೆಗಳಾದ ದಾಖಲೆಗಳಿಲ್ಲ.

ರಾಷ್ಟ್ರೀಯ ನಾಟಕ ಶಾಲೆಯ ಪದವೀಧರರ ಸಂಖ್ಯೆ ಏರುತ್ತಾ ಹೋದಂತೆ ರಾಜ್ಯದಲ್ಲೆಲ್ಲಾ ರಂಗಕಮ್ಮಟಗಳು ಜರುಗತೊಡಗಿದವು. ಕಾಲೇಜು ವಿದ್ಯಾರ್ಥಿಗಳನ್ನು ಅವು ಆಕರ್ಷಿಸಿದವು. ಉಷಾದೇವಿ ಎಂಬ ಕಾವ್ಯನಾಮವನ್ನು ಹೊಂದಿದ ಎನ್.ಎಸ್. ಲಲಿತಮ್ಮ ಎನ್ನುವವರು ರಾಷ್ಟ್ರೀಯ ನಾಟಕ ಶಾಲೆಯಿಂದ ತೇರ್ಗಡೆಯಾಗಿ ಹೊರಬಂದ ಕರ್ನಾಟಕದ ಮೊದಲ ಮಹಿಳೆ. ರಂಗಶಿಕ್ಷಣವನ್ನು ಪಡೆಯಬೇಕೆಂಬ ಅಭಿಲಾಷೆ ಸುಶಿಕ್ಷಿತ ಹೆಣ್ಣುಮಕ್ಕಳಲ್ಲೂ ಪ್ರಾರಂಭವಾಯಿತು. ನಂತರ ತೇರ್ಗಡೆಯಾಗಿ ಬಂದ ಪ್ರೇಮಾಕಾರಂತ್, ಆರ್.ಟಿ. ರಮಾ, ಭಾರತಿ, ಜಯಶ್ರೀ, ಎಸ್. ಮಾಲತಿ, ಪದ್ಮಶ್ರೀ, ಸುಂದರಶ್ರೀ, ಭಾಗೀರಥಿ ಮುಂತಾದವರು ಇವತ್ತಿಗೂ ರಂಗಭೂಮಿಯಲ್ಲಿ ಸಕ್ರಿಯವಾಗಿ ದುಡಿಯುತ್ತಿದ್ದಾರೆ.

ಇವರುಗಳ ಜೊತೆಯಲ್ಲೆ ರಂಗಶಿಕ್ಷಣವನ್ನು ಪಡೆಯದೆಯೂ ರಂಗಭೂಮಿಯತ್ತ ಧಾವಿಸಿ ಬಂದಿರುವ ಮತ್ತು ತಮ್ಮ ಅಭಿವ್ಯಕ್ತಿಗೆ ರಂಗಭೂಮಿಯೇ ಮಾಧ್ಯಮ ಎಂದು ನಂಬಿ ಬಂದ ವೈಶಾಲಿ, ಸುವರ್ಣ, ಉಮಾಶ್ರೀ, ಲಕ್ಷ್ಮಿಚಂದ್ರಶೇಖರ್, ಶಾಂತ, ಮಾಲತಿ ಸರೋಜ್, ತಾರಾ, ಕಲ್ಪನಾ ನಾಗಾನಾಥ್, ನಳಿನಿಮೂರ್ತಿ, ಸುನಂದಾ ಕಂದಗಲ್ಲ, ಗೀತಾ ಸುರತ್ಕಲ್, ಮೀರಾಮೂರ್ತಿ ಮುಂತಾದವರ ದೊಡ್ಡ ಪಟ್ಟಿಯೇ ಇದೆ. ಕೇವಲ ನಗರಗಳಲ್ಲಿ ಅಲ್ಲದೆ ಬೇರೆ ಬೇರೆ ಜಿಲ್ಲೆಗಳಲ್ಲೂ ಪ್ರಾರಂಭವಾಗಿ ಹೊಸಬರ ಆಗಮನವಾಯಿತು.

ಕನ್ನಡದಲ್ಲಿ ನವ್ಯ ಸಾಹಿತ್ಯ ಚಳವಳಿ ತುಂಬ ಪ್ರಭಾವಶಾಲಿಯಾದ ಕಾಲದಲ್ಲಿ ಗಿರೀಶ್ ಕಾರ್ನಾಡ್, ಲಂಕೇಶ್, ಚಂದ್ರಶೇಖರ ಕಂಬಾರರ ನಾಟಕಗಳು ಪ್ರದರ್ಶನಕ್ಕೆ ತಯಾರಾಗಿ ನಿಂತವು. ಈ ನಾಟಕಗಳಲ್ಲಿ ಹೊಸಬಗೆಯ ನಿರೂಪಣೆ, ಹೆಚ್ಚು ಹೆಚ್ಚು ಗುಂಪಿನ ದೃಶ್ಯಗಳು, ಸ್ತ್ರೀ ಪಾತ್ರಗಳು, ನೃತ್ಯ, ಸಂಗೀತ, ಮೇಳ ಮುಂತಾದ ಅಂಶಗಳಿಂದ ಜನರಿಗೆ ಹೆಚ್ಚು ಆಪ್ತವಾಗತೊಡಗಿತು. ಇದೇ ರೀತಿಯ ಬಹಳಷ್ಟು ನಾಟಕಗಳು ಸಿದ್ಧವಾದವು. ಹೆಚ್ಚ ಹೆಚ್ಚು ನಟಿಯರನ್ನು ಈ ನಾಟಕಗಳು ಬೇಡಿದವು. ಬಹಳಷ್ಟು ಕಲಾವಿದೆಯರು ಪ್ರವೇಶಿಸಿದರು. ಸಶಕ್ತವಾದ, ಸ್ತ್ರೀಸಂವಾದಿ ಗುಣಗಳುಳ್ಳ, ಸ್ವಾಭಿಮಾನಿಯಾದ, ಸ್ತ್ರೀಸತ್ವದಿಂದ ಕೂಡಿದ, ಮುಕ್ತ ಮನೋಭಾವದ, ಸ್ವಾತಂತ್ರ್ಯಾಭಿಲಾಷಿಯಾದ, ಅಸಮಾನತೆಯನ್ನು ಪ್ರಶ್ನಿಸುವ, ಹೋರಾಟದ ಬದುಕಿನ ಸ್ತ್ರೀ ಪಾತ್ರಗಳು ಸೃಷ್ಟಿಯಾದವು. ಈ ಪಾತ್ರಗಳನ್ನು ಕಲಾವಿದೆಯರು ಹೊಸ ಅನುಭವಕ್ಕೆ ತೆರೆದುಕೊಂಡಂತೆ ಅಭಿನಯಿಸಿದರು. ಹೀಗೆ ಬಂದವರೆಲ್ಲರೂ ಕೇವಲ ನಟಿಯರಾಗಲು ಹಾತೊರೆದರೇ ಹೊರತು ರಂಗಭೂಮಿಯ ಬೇರೆ ಬೇರೆ ಕ್ಷೇತ್ರಗಳಿಗಲ್ಲ. ಯಾವಾಗಲೂ ಸಾಂಸಾರಿಕ ಮತ್ತು ಸಾಮಾಜಿಕ ಒತ್ತಡಗಳಿಂದ ಅದುಮಲ್ಪಟ್ಟಿರುವ ಸ್ತ್ರೀಗೆ ಅಭಿನಯವೆಂಬುದು ತನ್ನೆಲ್ಲ ಒತ್ತಿಟ್ಟ ಭಾವನೆಗಳನ್ನು ಸ್ಫುರಿಸುವ ಕಾಲುವೆಯಾಗಿ ಕಂಡುಬಂದು ಅದರ ಮಲಕ ತನ್ನ ತನವನ್ನು ಗುರುತಿಸಿಕೊಳ್ಳುತ್ತ ಮಾನಸಿಕವಾಗಿ ಸ್ವಲ್ಪಮಟ್ಟಿಗೆ ಬಿಡುಗಡೆ ಹೊಂದಿದ ಕಾರಣದಿದಲೋ ಏನೋ ಬಹಳಷ್ಟು ಅಭಿನೇತ್ರಿಯರು ಹುಟ್ಟಿಕೊಂಡರು. ಹಾಗಾಗಿ ರಂಗಭೂಮಿ ಸ್ತ್ರೀಗೆ ಅಪೇಕ್ಷೆಯಾಗಿ, ಅಭಿವ್ಯಕ್ತಿಯ ತುಡಿತವಾಗಿ ಕಾಣಿಸಿತು. ಬೇರೆ ಬೇರೆ ಕಡೆ ಕೆಲಸ ಮಾಡುತ್ತಲೇ ಸಮಯ ಸಿಕ್ಕಾಗ ರಂಗಭೂಮಿಯಲ್ಲಿ ದುಡಿಯಲಾರಂಭಿಸಿದರು.

*(ಮುಂದುವರಿಯುವುದು)*

---

8. ಕನ್ನಡ ನಾಟಕಗಳಲ್ಲಿ ಸ್ತ್ರೀಲೋಕ – ಡಾ. ಹೇಮಾ ಪಟ್ಟಣಶೆಟ್ಟಿ




# ಕವಲುದಾರಿಯಲ್ಲಿ ಮಹಿಳೆ

*● ಹೆಚ್.ಎಸ್. ರಾಜೇಶ್ವರಿ*

*"ನಾವು ಎಷ್ಟೊಂತ ಬಗ್ಗುವುದು. ನೆಲತಾಕುವವರೆಗೆ ಬಗ್ಗಬಹುದು. ಆದ್ರೆ ಆಮೇಲೆ ಬೆನ್ನು ಎತ್ತಿ ಸೆಟೆದು ನಿಲ್ಲಬೇಕಾಗುತ್ತೆ. ನಾನು ಬದುಕುವುದಕ್ಕೆ ನನ್ನ ಮುಂದೆ ಇದ್ದ ಹಾದಿಗಳೆಲ್ಲಾ ಮುಚ್ಚಿಕೊಂಡಿದ್ದವು. ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದೆ. ಸಾವಿನ ತುದಿಯನ್ನು ಮುಟ್ಟಿ ಬಂದವಳು ನಾನು. ಆ ಕ್ಷಣದಲ್ಲಿ ನನ್ನ ಮನಸ್ಸಿನ ಮೂಲೆಯಲ್ಲಿ ಅಡಗಿಕುಳಿತಿದ್ದ ನನಗೇ ಅಪರಿಚಿತವಾಗಿದ್ದ ನನ್ನ ಧ್ವನಿ "ಛೀ ಹೇಡಿ, ಯಾಕೆ ಸಾಯ್ತಿದ್ದೀಯಾ? ಛಲದಿಂದ ಬದುಕಿ ತೋರ್ಸು" ಎಂದು ಹೇಳಿದ ಹಾಗಾಯಿತು. ಥೂ ಇಷ್ಟು ಕ್ಷುಲ್ಲಕ ಕಾರಣಕ್ಕೆ ನಾನೇಕೆ ಸಾಯಬೇಕು. ಮನಸ್ಸನ್ನು ಒಮ್ಮೆ ಬಟ್ಟೆ ಕೊಡವಿದ ಹಾಗೆ ಕೊಡವಿದೆ. ಗಂಡನ ಹಂಗನ್ನು ತೊರೆದು ಎರಡು ಮಕ್ಕಳನ್ನು ಸಾಕಿ. ನಾಲ್ಕು ಜನರಿಗೆ ಬದುಕಿ ತೋರ್ಸಬೇಕು. ಮರ್ಯಾದೆಗೆ, ಸಮಾಜಕ್ಕೆ ಅಂಜಿ ಯಾಕೆ ಸಾಯಬೇಕು? ಸಾವಿನ ಆ ಕ್ಷಣವನ್ನು ಆಕಸ್ಮಿಕವಾಗಿ ತಪ್ಪಿಸಿಕೊಂಡೆ, ಬದುಕಿನ ಹೊಸ ಬಾಗಿಲು ತೆರೆಯಿತು. ಧೈರ್ಯ, ಆತ್ಮವಿಶ್ವಾಸವನ್ನು ಬೆಳಸಿಕೊಂಡೆ. ಅವು ನನ್ನ ಶಾಶ್ವತ ಸಂಗಾತಿಗಳಾದವು. ಅವು ನಾನೇ ನಂಬಲಾಗದಂತಹ ಹೊಸ ದಿಕ್ಕನ್ನು ತೋರಿದವು."*

ಅದೊಂದು ಹಳ್ಳಿಹೆಣ್ಣುಮಕ್ಕಳ ಅನೌಪಚಾರಿಕ ಮಾತುಕತೆ, ತನ್ನ ಬದುಕಿನ ಎಳೆಗಳನ್ನು ಹಿಡಿದು ವಿಶಾಲ ಮಾತನಾಡುತ್ತಿದ್ದಳು. ಆಕೆಯ ಮಾತುಗಳು ನದಿಯಂತೆ ಹರಿಯುತ್ತಿತ್ತು. ಅಬ್ಬರ, ರೋಷ ಗೊಂದಲ ಯಾವುದೂ ಇಲ್ಲ. ಆಕೆಯ ಮನಸ್ಸು ತಿಳಿನೀರಿನಷ್ಟು ಸ್ಪಷ್ಟ. ಮಾತುಗಳಲ್ಲಿ ಸ್ವಾಭಿಮಾನ ತುಂಬಿ ತುಳುಕುತ್ತಿತ್ತು. ಆಕೆಯಲ್ಲಿದ್ದ ಧೈರ್ಯ, ಆತ್ಮವಿಶ್ವಾಸ, ಸ್ಪಷ್ಟತೆ, ವಿದ್ಯಾವಂತ, ಸರ್ಕಾರಿ ಕೆಲಸದಲ್ಲಿರುವ ನಾಲ್ಕಕ್ಕೆ ಸಂಬಳ ಪಡೆಯುವ ಮಹಿಳೆಯರನ್ನು ಮಹಿಳಾ ಸಂಘಟನೆಗಳಲ್ಲಿ ತೊಡಗಿಸಿಕೊಂಡ ನಮ್ಮಂಥವರನ್ನು ಅಣಕಿಸುವಂತಿದ್ದವು.

ವಿಶಾಲ ಎಸ್.ಎಸ್.ಎಲ್.ಸಿ. ಪರೀಕ್ಷೆ ಬರೆಯುತ್ತಿದ್ದಾಗಲೇ ಸೋದರ ಮಾವನ ಜೊತೆಗೆ ಮದುವೆಯ ಮಾತುಕತೆಯಾಗಿ ಕುತ್ತಿಗೆಗೆ ತಾಳಿ ಬಿತ್ತು. ಗಂಡ ವರದಕ್ಷಿಣೆ ತೆಗೆದುಕೊಂಡು ಬೇರೆಯವಳನ್ನು ಮದುವೆಯಾಗಬೇಕೆಂಬ ಇರಾದೆಯಿದ್ದವನು. ಇಪ್ಪತ್ತೆರಡು ವರ್ಷಕ್ಕೆಲ್ಲಾ ಆಕೆಯ ಬದುಕು ಮುರುಟಿ ಹೋಯಿತು. ನಾಲ್ಕು ಮಕ್ಕಳಾದವು. ಎರಡು ಬದುಕಿದವು, ಎರಡು ಸತ್ತವು. ಇಷ್ಟು ಚಿಕ್ಕ ವಯಸ್ಸಿಗೆ ಏನೇನು ಅನುಭವಿಸಬೇಕೊ ಅದನ್ನೆಲ್ಲಾ ಅನುಭವಿಸಿದಳು ವಿಶಾಲ. ಸೋಮಾರಿ ಗಂಡ, "ನೀನು ನನ್ನ ಮನೆಯ ಅನ್ನ ತಿನ್ನಲು ಬಂದಿದ್ದೀಯಾ, ನೀನು ನನಗೆ ಬೇಡ ಹೊರಟು ಹೋಗು" ಎಂದು ಸದಾ ಹಂಗಿಸುತ್ತಿದ್ದ. ಮೊದಮೊದಲು ಅಜ್ಜಿ ತಾತ ಸಪೋರ್ಟ್ ಮಾಡಿದರು. ಅವನನ್ನು ಸರಿದಾರಿಗೆ ತರುವ ಶಕ್ತಿ ಅವರಲ್ಲೂ ಉಡುಗಿಹೋಯ್ತು. ಗಂಡನಿಗೆ ಇಸ್ಪೀಟ್ ಆಟದ ಖಯಾಲಿ ಬೇರೆ. ಏನು ನಿರ್ಧಾರ ಮಾಡಬೇಕೆಂದು ತೋಚದೆ ಎಲ್ಲಾ ಗೋಜಲು ಗೋಜಲಾಯಿತು ಸಾವೇ ಇದಕ್ಕೆ ಉತ್ತರವೆನಿಸಿತ್ತು. ಮನಸ್ಸು ಬದಲಾಯಿಸಿದೆ. ಆದರೆ ಆತ ಡೈವೋರ್ಸ್ ಕೊಡಲು ನಿರ್ಧರಿಸಿದ. ಊರಿನ ಮುಖ್ಯಸ್ಥರು ಸೇರಿದರು. "ನಾನು ನಿನಗೆ ಬೇಡವಾದ ಮೇಲೆ ನಿನ್ನ ಹಂಗಿನಲ್ಲಿ ನಾನು ಬದುಕೋದಿಲ್ಲ. ನನ್ನ ಕಾಲ ಮೇಲೆ ನಾನು ಸ್ವತಂತ್ರವಾಗಿ ನಿಂತು ಸಂಪಾದನೆ ಮಾಡಿ ಮಕ್ಕಳನ್ನು ಸಾಕ್ತೀನಿ. ನಿನ್ನ ಅನ್ನದ ಹಂಗು ನನಗೂ ಬೇಡ. ಬದುಕಿ ತೋರ್ಸ್ತೀನಿ." ನನ್ನ ನಿರ್ಧಾರವನ್ನು ಮುಖ್ಯಸ್ಥರೆದುರಿಗೆ ಹೇಳಿದೆ. ಮನಸ್ಸಿನಲ್ಲಿ ಗಟ್ಟಿ ನಿರ್ಧಾರ ಮಾಡಿದೆ.

ಆಕೆ ಅಳಲಿಲ್ಲ. ಗೋಗರೆಯಲಿಲ್ಲ. ಆಕಾಶ ಕಳಚಿ ಬಿತ್ತೆಂಬ ಆತಂಕವೂ ಆಕೆಗಿರಲಿಲ್ಲ. ಆಕೆಯ ಆಪ್ತರು ನೀಡಿದ ಧೈರ್ಯದ ಮಾತುಗಳು ಆಕೆಗೆ ದಾರಿದೀಪವಾಯಿತು. ಸಿಕ್ಕಿದ ಹುಲ್ಲುಕಡ್ಡಿಯನ್ನು ಹಿಡಿದು ಈಜುವ ಧೈರ್ಯ ತೆಗೆದುಕೊಂಡಳು. ಸಮಾಜ, ಅದಕ್ಕೇಕೆ ಹೆದರಬೇಕು. ನನ್ನ ಬಾಳು ಕೆಟ್ಟು ಹೋದಾಗ ಯಾರು ಬರ್ತಾರೆ. ಗಂಡ ಇಲ್ದೆ ಇದ್ರು ನಾನು ಬದುಕಬೇಕೂ; ಬದುಕ್ತೀನಿ. ಭರವಸೆಯೇ ಎದೆಯೊಳಗುರಿಯುವ ಚೈತನ್ಯವಾಯಿತು.

ಪಂಚಾಯಿತಿಗೆ ಸೇರಿದವರು ಅಕೆಗೆ ಗಡುವು ನೀಡಿದ್ದರು. "ನನ್ನ ಬಿಟ್ಟು ಹೇಗೆ ಬದುಕ್ತೀಯಾ? ಒಂದು ದಿನದ ಅನ್ನವನ್ನು ಹೇಗೆ ಹೊಂಚುತ್ತೀಯಾ ನೋಡ್ತೀನಿ" ಅನ್ನುತ್ತಿದ್ದ ಗಂಡ. ಗಡುವು ಮುಗಿದ ಮೇಲೆ ಆಕೆ ತನ್ನ ನಿರ್ಧಾರವನ್ನು ಹೇಳಿದ್ಲು. ಆದ್ರೆ ಆತ ತನ್ನ ನಿಲುವನ್ನು ಬದಲಾಯಿಸಿದ್ದ. ಹೆಂಡತಿಯ ಜೊತೆಗೇ ಬದುಕ್ತೀನಿ ಎಂದ. ಅವನ ಈ ನಿರ್ಧಾರ ಆಕೆಯಲ್ಲಿ ಆಶ್ಚರ್ಯವನ್ನು ಉಂಟುಮಾಡಿತು. ಆಕೆ ನಿರೀಕ್ಷೆ ಮಾಡಿರಲಿಲ್ಲ. ಊಟ ಮಾಡಿ ಕೈ ತೊಳೆದಷ್ಟು ಸುಲಭವಾಗಿ ನನ್ನನ್ನು ಬಿಡಲು ತಯಾರಾಗಿದ್ದವನು. ನಾನು ಗೋಗರೆಯುತ್ತೇನೆ, ಅತ್ತು ಕರೆದು ರಂಪ ಮಾಡುತ್ತೇನೆ, ನನ್ನ ತಂದೆ-ತಾಯಿಯರು ಬಂದು ಅಂಗಲಾಚುತ್ತಾರೆಂದುಕೊಂಡಿದ್ದನೇನೊ ಅವನ ಈ ಬದಲಾವಣೆಯ ಕಾರಣವನ್ನು ಹುಡುಕತೊಡಗಿದಳು. ನನ್ನ ಧೈರ್ಯದ ಮಾತುಗಳು ಆತನನ್ನು ಕಂಗೆಡಿಸಿದ್ದವು. ನನ್ನನ್ನು ಹೆದರಿಸಿ ನೋಡಿದ, ಅದು ಪರಿಣಾಮಕಾರಿ ಎಂದು ತೋರಲಿಲ್ಲ. ನಾನು ಅವಳನ್ನು ಬಿಟ್ಟರೆ, ತನ್ನ ಜೀವನ ಮೂರಾಬಟ್ಟೆಯಾಗುತ್ತದೆ ಎಂದು ದಿಢೀರೆಂದು ಬಣ್ಣ ಬದಲಾಯಿಸಿದನೇನೊ.

ಗಂಡನ ಈ ತೀರ್ಮಾನ ವಿಶಾಲಳಿಗೆ ಸಂತೋಷವನ್ನು ನೀಡಲಿಲ್ಲ. ಅನಿವಾರ್ಯವಾಗಿ ಒಪ್ಪಿಕೊಂಡಳು. ಆದರೆ ಸ್ವಾಭಿಮಾನಿ. ಸ್ವತಂತ್ರವಾಗಿ ದುಡಿಯುವ ಹೆಂಗಸಾಗಿ, "ನನ್ನ ಜೀವ ಇರುವವರೆಗೆ ನನ್ನ ಅನ್ನಕ್ಕಾಗಿ ಕೈ ಚಾಚುವುದಿಲ್ಲ. ನಾನು ದುಡಿದು ನನ್ನ ಜೀವನವನ್ನೂ ರೂಪಿಸಿ ಕೊಳ್ತೀನಿ" ಎಂದ್ಲು. ಆತ ಒಪ್ಪಿಕೊಂಡಂತೆ ತಲೆಯಾಡಿಸಿದ.

ವಿವಾಹಗಳು ಒಡೆದು ಹೋದಾಗ ಬಹಳಷ್ಟು ಹೆಣ್ಣುಮಕ್ಕಳಲ್ಲಿ ಅದರಲ್ಲೂ ವಿದ್ಯಾವಂತ, ಆರ್ಥಿಕವಾಗಿ ಸ್ವಾತಂತ್ರ್ಯ ಪಡೆದ, ಎನ್.ಜಿ.ಓ.ಗಳಲ್ಲಿ ಮಹಿಳಾ ಸಂಘಟನೆಗಳಲ್ಲಿರುವವರಲ್ಲಿಯೂ ಬದುಕುವ ಚೈತನ್ಯ ಉಡುಗಿ ಹೋಗುತ್ತದೆ. ಸಮಾಜಕ್ಕೆ ಹೆದರಿಯೋ ಅಥವಾ ಸ್ವಾಭಿಮಾನದ ಕೊರತೆಯಿಂದಲೊ ತಮ್ಮ ಜೀವನವನ್ನು ನರಕಮಾಡಿ ಕೊಳ್ಳುತ್ತಾರೆ. ದುರಂತ ನಾಯಕಿಯರಂತೆ ಪೋಸ್ ಕೊಡುತ್ತಾರೆ.

ಗೋಗರೆಯುತ್ತಾರೆ. ಬ್ಲಾಕ್ ಮೇಲ್ ಮಾಡುತ್ತಾರೆ. ಅವನು ಪುನಃ ಬರುವುದಾದಲ್ಲಿ ಎಲ್ಲಾ ರೀತಿಯ ಹೊಂದಾಣಿಕೆಗೂ ಸಿದ್ಧರಾಗುತ್ತಾರೆ. ಅವನು ಹಾಕಿದ ಲಕ್ಷ್ಮಣ ರೇಖೆಯನ್ನು ಜೋಪಾನವಾಗಿ ಇವರೇ ಕಾಯುತ್ತಾರೆ. ಅದರ ಸಮರ್ಥನೆಗಾಗಿ ಏನೇನೊ ವಾದಗಳನ್ನು ಹುಡುಕುತ್ತಾರೆ. ಅವನ ಗೌರವವನ್ನು ಕಾಪಾಡುವ ಕರಟಗಳಾಗುತ್ತಾರೆ. ಆತ್ಮೀಯರಲ್ಲೊ ಸಂಘಟನೆಗಳಲ್ಲೊ ಹಂಚಿಕೊಂಡಿದ್ದರೂ ಯಾರಿಗೂ ಹೇಳಬೇಡಿರೆಂಬ ಮಾತಿನ ಬೀಗವನ್ನು ಹಾಕುತ್ತಾರೆ. ಈ ಯಾವ ಹಿನ್ನಲೆ ಇರದ ವಿಶಾಲ "ನನ್ನ ಗಂಡ ಪುನಃ ಒಪ್ಪಿಕೊಂಡಿದ್ದು ನನಗಾಗಿ ಅಲ್ಲ, ಅವನ ಉಳಿವಿಗಾಗಿ. ನಾನು ಮಾನ ಮರ್ಯಾದೆಗೆ ಅಂಜಿದ್ರೆ ನನ್ನ ಬದುಕೇ ನಾಶವಾಗುವುದು. ಗಂಡಸರಿಗೆ ಕುಟುಂಬದ ಜವಾಬ್ದಾರಿಗಳಾವುವೂ ಬೇಡ. ಆದ್ರೆ ಕುಟುಂಬ ಅವರಿಗೆ ಬೇಕು. ಅದು ಅವರ ಅಗತ್ಯ. ಆದ್ರೆ ಹೆಂಗಸರಿಗೆ ಕುಟುಂಬ ಅನಿವಾರ್ಯ, ಈ ಸತ್ಯ ನಮಗೆ ಅರ್ಥವಾಗಬೇಕು" ಆಕೆ ಎಷ್ಟು ಸುಲಭವಾಗಿ ಸರಳವಾಗಿ ಇತಿಹಾಸವನ್ನು ಕಣ್ಣುಮುಂದೆ ಬಿಚ್ಚಿಟ್ಟಳು. ಪುಸ್ತಕದ ಥಿಯರಿಗಳನ್ನು ಎಷ್ಟು ಪರಿಣಾಮಕಾರಿಯಾಗಿ ತನಗರಿವಿಲ್ಲದೆ ಅಳವಡಿಸಿಕೊಂಡಿದ್ದಳು.

ವಿಶಾಲ ಹೊಲಿಗೆ ಕಲಿತ್ಲು. ಒಂದು ಮಿಶಿನ್ ತೆಗೆದುಕೊಂಡು ತನ್ನ ಗಂಡನಿಗಿಂತಾ ಹೆಚ್ಚು ಸಂಪಾದಿಸತೊಡಗಿದಳು. ಗಂಡನಿಗೆ ಸಹಿಸಲು ಸಾಧ್ಯವಾಗಲಿಲ್ಲ. ಹೊಲಿಯಲು ಬಟ್ಟೆ ಕೊಡಲು ಬಂದವರನ್ನು ಅವಮಾನಿಸುತ್ತಿದ್ದ. ಬಟ್ಟೆಯನ್ನು ಕಿತ್ತೆಸೆಯುತ್ತಿದ್ದ. ಒಂದೆರೆಡು ದಿನ ದಿಕ್ಕು ತೋಚದೆ ಕೊರಗಿದಳು. ಒಂದು ದಿನ "ಇವತ್ತೆ ಕೊನೆ, ಇನ್ನೊಂದು ದಿನ ನೀನು ಬಟ್ಟೆ ಕಿತ್ತೆಸೆದು, ಮನೆಗೆ ಬಂದವರನ್ನು ಅವಮಾನ ಮಾಡಿದ್ರೆ ನಿನ್ನ ಕತ್ತಿನ ಪಟ್ಟಿ ಹಿಡಿದು ಮನೆಯಿಂದ ಹೊರಗೆ ಹಾಕ್ತೀನಿ. ಅದೇನು ಅವಮಾನ ಆಗುತ್ತೆ ನಾನು ನೋಡ್ತೀನಿ. ಮನೆಯೊಳಗೆ ನೀನು ನನ್ನ ಅವಮಾನ ಮಾಡಿದ್ರೆ ನಾನೂ ಮನೆ ಹೊರಗೆ ನಿನ್ನ ಮಾನ ತೆಗೀತೀನಿ. ನಾಲ್ಕು ಜನ ಹೇಳ್ಲಿ, ನಾನು ಏನು ತಪ್ಪು ಮಾಡ್ತಾ ಇದ್ದೀನಿ ಅಂತ" ಎಂದು ಗುಟುರು ಹಾಕಿದ್ಲು. ಅವನು ಸೈಲೆಂಟಾದ. ನಾವು ಬಗ್ಗತೀವಿ ಅಂತ ಗೊತ್ತಾದ್ರೆ ತುಳೀತಾನೆ ಇರ್ತಾರೆ. ಅವರು ಮನೆಯೊಳಗೆ ನಮ್ಮನ್ನು ಪ್ರೀತಿ, ವಿಶ್ವಾಸದಿಂದ ನೋಡಿಕೊಂಡ್ರೆ ನಾವೂ ಹಾಗೇ ನೋಡ್ಕೊಬೇಕು. ಇದುವರೆಗೂ ನಾನು ನನಗಾಗಿ ಅವನ ಹತ್ರ ಕೈ ಚಾಚಿಲ್ಲ. ಈಗಾಗ್ಲೆ ಸುಮಾರು ಮೂವತ್ತು ಸಾವಿರ ಕೂಡ್ಸಿ ಇಟ್ಟಿದ್ದೆ. ಮನೆ ರಿಪೇರಿಗೆ ಬೇಕು ಅಂದ, ಕೊಟ್ಟೆ. ಈಗ ಪುನಃ ಮೂವತ್ತುಸಾವಿರ ಇಟ್ಟಿದ್ದೇನೆ. ನನ್ನ ಖರ್ಚು, ವೆಚ್ಚ, ಓಡಾಟಕ್ಕೆ ನನಗೆ ಬೇಕಾಗಿದ್ದು ತೆಗೆದುಕೊಳ್ಳುವುದು ಎಲ್ಲಾ ನನ್ನ ದುಡ್ಡಿನಿಂದ, ಅವನು ನನ್ನ ದುಡ್ಡು ಕೇಳಿದಾಗಲೆಲ್ಲಾ ಜಗಳವಾಡಿದ್ದೇನೆ. ಅದನ್ನು ನಾನೇನು ದುಂದುವೆಚ್ಚ ಮಾಡಲ್ಲ. ಆದ್ರೆ ಅವನ ಕೈಗೆ ಕೊಡಲ್ಲ. ಮನೆಯಲ್ಲಿ ಎಲ್ಲಾ ಕೆಲ್ಸ ಮಾಡಿಕೊಂಡು ಮಕ್ಕಳನ್ನು ನೋಡಿಕೊಂಡು, ಅವನಿಗೂ ಸಮಯಕ್ಕೆ ಸರಿಯಾಗಿ ಬೇಯ್ಸಿ ಹಾಕಿ ಅಚ್ಚುಕಟ್ಟಾಗಿ ಕುಟುಂಬ ನೋಡ್ಕೋತೀನಿ. ಇದೆಲ್ಲಾ ಮಾಡಿ ಬಿಡುವಿನ ಸಮಯದಲ್ಲಿ ನಾನು ನಾಲ್ಕು ಕಾಸು ದುಡ್ಕೋತೀನಿ. ಆ ಹಣವನ್ನೂ ನಾನು ಯಾಕೆ ಕೊಡಬೇಕು? ಅದು ನನ್ನ ಹಣ. ನನಗೆ ಬೇಕೆನಿಸಿದಾಗ ನಾನು ವಿವೇಚನೆಯಿಂದ ಖರ್ಚು ಮಾಡ್ತೀನಿ. ನಾನು ಎಲ್ಲಿಗಾದ್ರು ಹೋಗ್ಬೇಕಾದ್ರೆ ಅವನಿಗೆ ವಿಷಯ ತಿಳಿಸ್ತೀನಿ. ಅವನ ಅನುಮತಿಗಾಗಿ ಕಾಯಲ್ಲ. ನಾನು ದುಡಿಯುವುದರಿಂದ ಕುಟುಂಬದ ಜವಾಬ್ದಾರಿಗಳನ್ನು ನಾನು ಅವನ ಮೇಲೆ ಹೇರಿಲ್ವಲ್ಲಾ? ದಿಟ್ಟವಾಗಿ ಕೇಳುತ್ತಾಳೆ ವಿಶಾಲ.

ಎಷ್ಟು ಜನ ಹೆಣ್ಣುಮಕ್ಕಳು ಈ ಸ್ವಾತಂತ್ರ್ಯವನ್ನು ಪಡೆದಿದ್ದಾರೆ. ಹೆಣ್ಣುಮಕ್ಕಳು ದುಡಿಯುತ್ತಿದ್ದರೂ ಅವರ ವೇತನದ ನಿಯಂತ್ರಣ ಸಂಪೂರ್ಣ ಗಂಡಸರ ಕೈಯಲ್ಲಿ. ಸಂಬಳ ತೆಗೆದುಕೊಂಡು ಹೋಗಿ ಗಂಡನ ಕೈಗೆ ಕೊಡುವವರೇ ಹೆಚ್ಚು. ನನ್ನ ಗೆಳತಿಯೊಬ್ಬಳು ಪ್ರತಿ ತಿಂಗಳೂ ಸಂಬಳ ಬಂದ ಕೂಡಲೇ ತೆಗೆದು ಗಂಡನಿಗೆ ಕೊಟ್ಟು ಬಿಡಬೇಕು. ಕೆಲಸಕ್ಕೆ ಹೋಗೋಕೆ ಮೊದಲು, ಮನೆಗೆ ಬಂದ ಮೇಲೆ ಮನೆಕೆಲ್ಸಾ ಎಲ್ಲಾ ಅಚ್ಚುಕಟ್ಟಾಗಿ ಮಾಡ್ಕೋತಾಳೆ ಗಂಡ ಮನೆಯಲ್ಲಿ ಒಂದು ಕಡ್ಡಿ ಜರುಗಿಸಿದವನಲ್ಲಾ. ಹೆಂಡತಿಗೆ ಸೀರೆ ತಗೋಳೊದಕ್ಕೆ ಹಣ ಕೊಡ್ತಾನೆ, ಹೋಟೆಲ್ಲಿಗೂ ಆಗಾಗ ಕರೆದುಕೊಂಡು ಹೋಗ್ತಾನೆ. ಎಲ್ಲಿಗಾದ್ರು ಹೋಗಬೇಕಾದ್ರೆ, ವಿಶೇಷವಾಗಿ ತವರು ಮನೆಗೆ, ಒಲ್ಲದ ಮನಸ್ಸಿನಿಂದ ಒಪ್ಪಿಗೆ ಕೊಡುತ್ತಾನೆ. ಇವನ ಜೊತೆಗೆ ಯಾರು ದಿನಾ ಜಗಳವಾಡ್ತಾರೆ ಅಂತ ಆಕೆ ಒಳದಾರಿಗಳನ್ನು ಹುಡುಕಿಕೊಂಡಿದ್ದಾಳೆ. ಹೆಚ್ಚುವರಿ ಯಾವುದಾದರೂ ಹಣಬಂದಾಗ ಗಂಡನಿಗೆ ಸುಳಿವು ನೀಡುತ್ತಿರಲಿಲ್ಲ. ಕಛೇರಿಯಿಂದ ಯಾವುದಾದ್ರು ತರಬೇತಿಗೆ ಹೋದ್ರೆ ಐದು ದಿನ ಎಂದು ಮನೆಯಲ್ಲಿ ಹೇಳಿ ಎರಡು ದಿನ ತವರು ಮನೆಗೆ ಹೋಗಿ ಬರ್ತಾಳೆ.

ಇನ್ನೊಬ್ಬಾಕೆ ಪದವೀಧರೆ ಒಳ್ಳೆ ಕೆಲಸ. ಆದ್ರೆ ಗಂಡನದು ಒಂದು ಕೆಲಸಕ್ಕೆ ಅಂಟಿಕೊಳ್ಳುವ ಜಾಯಮಾನವಲ್ಲ. ತಾನು ಅಖಂಡ ಸೃಜನಾತ್ಮಕ ಎನ್ನುವ ಅಹಂಭಾವ ಬೇರೆ. ಈಕೆಗೆ ಮಕ್ಕಳ ಮುಂದಿನ ಜೀವನದ ಅಭದ್ರತೆಯ ಆತಂಕ. ತಾನು ದುಡಿದದ್ದನ್ನು ಅವನ ಕೈಗೆ ಕೊಡದಿದ್ದರೂ ಸಂಪೂರ್ಣವಾಗಿ ಕುಟುಂಬಕ್ಕೆ ಖರ್ಚುಮಾಡಿ, ನಿಜವಾಗಿ ಅವಳಿಗೇ ಅಗತ್ಯವಿರುವಾಗಲೆಲ್ಲಾ ಬರಿಗೈಯಾಗುತ್ತಿದ್ದಳು. ಇವರಿಬ್ಬರೂ ಅಮಾಯಕ ಹೆಂಗಸರೇನಲ್ಲ. ಹೊರಗಿನ ಸಮಾಜಕ್ಕೆ ಸಂಪೂರ್ಣ ಸ್ವಾತಂತ್ರವನ್ನು ಪಡೆದವರಂತೆ ಗೋಚರಿಸುತ್ತಾರೆ. ಆದರೆ ವಿಶಾಲಳು ಆಯ್ಕೆ ಮಾಡಿಕೊಂಡ ಹಾದಿಯಷ್ಟು ನೇರವಾದ, ದಿಟ್ಟವಾದ ಹಾದಿ ಇವರದಲ್ಲ.

ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣಿನ ಮೇಲೆ ನಡೆಯುವ ಶೋಷಣೆ ಅವರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಿದೆ. ಇದು ಕ್ರೌರ್ಯದ ರೂಪವನ್ನು ಪಡೆದಾಗ ಸಮಾಜ ಮರುಗುತ್ತದೆ. ಪ್ರತಿಭಟನೆಯ ಧ್ವನಿಗಳೂ ಕಂಡುಬರುತ್ತವೆ. ಆದರೆ ನಾಲ್ಕು ಗೋಡೆಯ ಮಧ್ಯೆ ತಣ್ಣಗೆ ನಡೆಯುವ ಈ ಕ್ರೌರ್ಯವನ್ನು ಎದುರಿಸುವ ಬಗೆ ಯಾವುದು? ಪ್ರತಿ ಕ್ಷಣ ಕ್ಷಣಕ್ಕೂ ಸ್ವಾಭಿಮಾನದಿಂದ ಸಂಘರ್ಷದ ಹಾದಿಯನ್ನೇ ಆಯ್ಕೆ ಮಾಡಿಕೊಳ್ಳಬೇಕೆ? ಅಥವಾ ಸುಲಭವಾದ ಸರಳವಾದ ಒಳದಾರಿಗಳನ್ನು ಆಯ್ಕೆ ಮಾಡಿಕೊಳ್ಳಬೇಕೆ? ಒಳದಾರಿಗಳಲ್ಲಿ ಸುಳ್ಳಿಗೆ ಸುಳ್ಳು ಸೇರಿಸುತ್ತಾ, ಮರೆಮಾಡುತ್ತಾ, ತಂತ್ರಗಳನ್ನು ಹೆಣೆಯುತ್ತಾ ಮುಖವಾಡಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ಕೌಟುಂಬಿಕ ಹೊಂದಾಣಿಕೆಗಾಗಿ ಬಹಳಷ್ಟು ಮಹಿಳೆಯರು ಈ ಹಾದಿಗಳನ್ನು ತುಳಿಯುತ್ತಾರೆ. ಸಮಾನತೆಯನ್ನು ಎತ್ತಿಹಿಡಿಯುವ ಮಹಿಳೆಯರು ಇದರಿಂದ ಹೊರತಾಗಿಲ್ಲ. ಈ ಹಾದಿ ಸಮಸ್ಯೆಯ ಸಂಕೀರ್ಣತೆಯನ್ನು, ಅದರ ಸಾಮಾಜಿಕ ಸ್ವರೂಪವನ್ನು, ಆಯಾಮವನ್ನು ಮುಚ್ಚಿ ಹಾಕುತ್ತದೆ. ಸಮಸ್ಯೆಗೆ, ಸಂದರ್ಭಕ್ಕೆ ಮುಖಾಮುಖಿಯಾಗುವುದರಿಂದ ತಪ್ಪಿಸಿಕೊಳ್ಳುತ್ತೇವೆ. ಒಳದಾರಿಗಳು ಯಥಾಸ್ಥಿತಿಯನ್ನು ಗಟ್ಟಿಗೊಳಿಸುತ್ತವೆ. ಬಲಪಡಿಸುತ್ತವೆ. ಸಮಸ್ಯೆ ಸಂದರ್ಭದ ಮುಖಾಮುಖಿ ಹೊಸಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಬೇರುಗಳನ್ನು ಅಲುಗಾಡಿಸುತ್ತದೆ. ಹೊಸ ಬದುಕಿನ ಬಾಗಿಲನ್ನು ತೆರೆಯುತ್ತದೆ. ಆದರೆ ಆಯ್ಕೆ ನಮ್ಮದು. ●

---

*ಈ ಸಂಚಿಕೆಯ ಪ್ರಾಯೋಜಕರು : ಡಿ.ಎಸ್. ಸುರೇಶ್ (ಚಿಕ್ಕಸುರೇಶ)*

Registered with Registrar of Newspapers of India under No. KARKAN/2007/22289
**'NAMMA MANASA'**, REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018